# ಶ್ರೀರಾಮಕೃಷ್ಣ ಪರಮ ಹಂಸರ ಸತ್ಕಥೆಗಳು.



ಇದನ್ನು

**ಗದಿಗೆಯ್ಯಾ ಹುಚ್ಚಯ್ಯಾ ಹೊನ್ನಾಪುರಮಠ**

ಡಿಸ್ಟ್ರಿಕ್ಟಕೋರ್ಟ ಪ್ಲೀಡರ ಧಾರವಾಡ

ಇವರು ರಚಿಸಿ

ತಮ್ಮ ಸ್ವಾಮಿತ್ವವುಳ್ಳ ಧಾರವಾಡ ಚಂದ್ರೋದಯ ಮುದ್ರಣಾಲಯದಲ್ಲಿ
ಮುದ್ರಿಸಿ ಅಲ್ಲಿಂಯೇ ಪ್ರಸಿದ್ಧಮಾಡಿದರು.



ಸುಧಾರಿಸಿ ಬೆಳೆಸಿದ

೨ ನೇ ಆವೃತ್ತಿ.



೧೯೩೨ ಸಪಟಂಬರ.







**ಬೆಲೆ ೮ ಆಣೆ.**

# ಪ್ರಸ್ತಾವನೆ.



ಶ್ರೀರಾಮಕೃಷ್ಣ ಪರಮಹಂಸರಂಥ ಮಹಾತ್ಮರು ಜಗತ್ತಿನಲ್ಲಿ ದೊರಕುವದು ಬಹಳ ವಿರಳ. ಇವರ ಓಜಸ್ವಿಯಾದ ಚರಿತ್ರವನ್ನಾಗಲಿ, ಸತ್ಕಥೆಗಳನ್ನಾಗಲಿ, ಸುಬೋಧ ವಚನಗಳನ್ನಾಗಲಿ ಓದಿದವರು ಮತ್ತು ಕೇಳಿದವರು ಇವರು ಜಗತ್ತಿನಲ್ಲಿಯ ದೊಡ್ಡ ವಿಭೂತಿಗಳೆಂದು ಎಂದಿಗೂ ಹೇಳದೆ ಇರಲಾರರು. ಇವರ ಚರಿತ್ರದ ಮೇಲಿಂದ ಇವರು ಶ್ರೀವಿಷ್ಣುವಿನ ಅವತಾರವಾಗಿದ್ದಕಿಂತಲೂ ಇವರ ಸತ್ಕಥೆಗಳು ಮತ್ತು ಸುಬೋಧ ವಚನಗಳು ಜನಸಾಮಾನ್ಯರಿಗೆ ಭಗವದ್ಗೀತೆಯಕಿಂತಲು ಹೆಚ್ಚು ಉಪಯುಕ್ತವಾದವುಗಳೆಂತಲೂ ಸ್ಪಷ್ಟವಾಗಿ ತಿಳಿಯುವದು. ಇವರ ಬಗ್ಗೆ ಮತ್ತು ಇವರ ಉಪದೇಶಾಮೃತದ ಬಗ್ಗೆ ಬಾಬು ಕೇಶವ ಚಂದ್ರಸೇನ, ಸ್ವಾಮಿ ಶ್ರದ್ಧಾನಂದ ಮಹಾತ್ಮಾಗಾಂಧಿ ಮೊದಲಾದವರು ಅತ್ಯಂತ ಸ್ತುತಿಯನ್ನು ಮಾಡಿ ಇವರಿಗೆ ತಮ್ಮ ನಿಸ್ಸೀಮ ಭಕ್ತಿಯನ್ನು ವ್ಯಕ್ತಗೊಳಿಸಿರುತ್ತಾರೆ. ಇದಲ್ಲದೆ ಪ್ರೊಫೆಸರ ಮ್ಯಾಕ್ಸಮುಲ್ಲರರಂಥ ಜರ್ಮನಿಯ ಪಂಡಿತರು ಮತ್ತು ವೇದಶಾಸ್ತ್ರ ಪಾರಂಗತರು ಹಾಗೂ ಇತರ ಅನೇಕ ಪಾಶ್ಚಿಮಾತ್ಯ ಪಂಡಿತರು ಇವರನ್ನು ಅನೇಕ ಕಡೆಗೆ ಅನೇಕ ರೀತಿಯಿಂದ ಸ್ತುತಿಸಿ ತಾವೂ ಇವರ ಭಕ್ತರ ಮಾಲಿಕೆಯಲ್ಲಿಯೇ ಸೇರಿ ಆತ್ಮ ಗೌರವವನ್ನು ಪಡೆದುಕೊಂಡು ತಮ್ಮ ದೇಹವನ್ನು ಸಾರ್ಥಕಗೊಳಿಸಿದ್ದಾರೆ. ಇಂಥ ಮಹಾತ್ಮರ ಪುಣ್ಯ ಚರಿತ್ರವನ್ನೂ ಸುಬೋಧ ವಚನಗಳನ್ನೂ ಓದುವದು ಮತ್ತು ಕೇಳುವದು ಪರಮಭಾಗ್ಯವೇ ಸರಿ. ಮಾಯಾವತಿಯಲ್ಲಿರುವ ಅದ್ವೈತ ಆಶ್ರಮದವರು ಸನ್ ೧೯೦೦ ರಿಂದ ೧೯೨೩ ನೇ ಇಸವಿಯತನಕ ಪ್ರಬುದ್ಧ ಭಾರತವೆಂಬ ಮಾಸಿಕ ಪುಸ್ತಕದಲ್ಲಿಯೂ ಇತರ ಬಂಗಾಲಿ ಮತ್ತು ಇಂಗ್ಲಿಷ ಪತ್ರಿಕೆಗಳಲ್ಲಿಯೂ ಪ್ರಸಿದ್ಧವಾದ ಶ್ರೀಪರಮಹಂಸರ ಸತ್ಕಥೆಗಳನ್ನೂ ಸುಬೋಧ ವಚನಗಳನ್ನೂ ಒತ್ತಟ್ಟಿಗೆ ಸಂಗ್ರಹ ಮಾಡಿ ಭಾಗ ೧ ಮತ್ತು ಭಾಗ ೨ ಎಂಬ ಎರಡು ಇಂಗ್ಲಿಷ ಪುಸ್ತಕಗಳನ್ನು ಪ್ರಸಿದ್ಧಪಡಿಸಿರುತ್ತಾರೆ. ಅವುಗಳನ್ನು ನಾವು ಮೂಲ ಆಧಾರವಾಗಿಟ್ಟುಕೊಂಡು ಅವುಗಳಲ್ಲಿಯ ಯಾ

ವತ್ತು ಕಥೆಗಳನ್ನು ನನ್ನ ಕನ್ನಡ ವಾಚಕರಿಗಾಗಿ ಭಾಷಾಂತರ ಮಾಡಿ ಆ ಕಥೆಗಳ ಕೆಳಗೆ ಅವುಗಳ ಮೇಲಿಂದ ಲಕ್ಷ್ಯದಲ್ಲಿಡತಕ್ಕ ತಾತ್ಪರ್ಯವನ್ನು ಸಹ ಬರೆದಿರುತ್ತೇನೆ. ಈ ಕಥೆಗಳು ಶ್ರೀಪರಮಹಂಸರು ಹೇಳಿದ ಯಾವತ್ತು ಮುಖ್ಯ ಕಥೆಗಳಿದ್ದು ಈ ಕಥೆಗಳ ಹೊರತಾಗಿ ಇನ್ನೂ ಹೆಚ್ಚು ಕಥೆಗಳು ಇರುವದಿಲ್ಲವೆಂದು ಮಾತ್ರ ನಾನು ಹೇಳಲಾರೆನು. ಆದರೆ ಈಗ ಉಪಲಬ್ಧವಾಗಿರುವ ಸಾಹಿತ್ಯಗಳಿಂದ ಆರಿಸಿ ತೆಗೆದುಕೊಂಡ ಕಥೆಗಳು ಈ ನನ್ನ ಪುಸ್ತಕದಲ್ಲಿ ಪೂರ್ಣವಾಗಿ ಬಂದಿರುತ್ತವೆಂದು ಮಾತ್ರ ನಾನು ಹೇಳುತ್ತೇನೆ. ಈ ನನ್ನ ಪುಸ್ತಕವು ಚಿಕ್ಕದಿದ್ದಾಗ್ಯೂ ಯಾವತ್ತು ಕನ್ನಡ ಬಂಧುಭಗಿನಿಯರ ವಾಚನಕ್ಕೆ ಅತ್ಯಂತ ಉಪಯೋಗ ಬೀಳುವದೆಂತಲೂ ಅವರೆಲ್ಲರ ಆತ್ಮಿಕ ಉನ್ನತಿಗೆ ಇದು ಬಹಳ ಸಹಾಯವಾಗುವದೆಂತಲೂ ನನಗೆ ಆತ್ಮವಿಶ್ವಾಸವುಂಟು.

ತಮ್ಮ ವಿಧೇಯ

ಧಾರವಾಡ.<br>ತಾ. ೫-೧೧-೧೯೨೮ } **ಗ. ಹು. ಹೊನ್ನಾಪುರಮಠ.**<br>ಗ್ರಂಥಕರ್ತ.

---

## ೨ ನೇ ಆವೃತ್ತಿಯು ಪ್ರಸ್ತಾವನೆ.

೧ ನೇ ಆವೃತ್ತಿಯ ಪ್ರತಿಗಳು ಸುಮಾರು ೪ ವರ್ಷಗಳ ತರುವಾಯ ತೀರಿಹೋದ್ದರಿಂದ ಈಗ ಈ ಎರಡನೇ ಆವೃತ್ತಿಯನ್ನು ಹೊಸದಾಗಿ ಮುದ್ರಿಸಿರುತ್ತೇನೆ. ೧ ನೇ ಆವೃತ್ತಿಯ ಪುಸ್ತಕದಲ್ಲಿ ನನಗೆ ಕಂಡುಬಂದ ಕೆಲಕೆಲವು ತಪ್ಪುಗಳನ್ನು ತಿದ್ದಿರುವದಲ್ಲದೆ, ೭೭ ರಿಂದ ೮೮ ಪೂರಾ ಅಂದರೆ ಹನ್ನೆರಡು ವಿಷಯಗಳನ್ನು ಈ ಎರಡನೇ ಆವೃತ್ತಿಯಲ್ಲಿ ಹೆಚ್ಚಿಗೆ ಸೇರಿಸಿ ಈ ಪುಸ್ತಕದ ಬೆಲೆಯು ಹತ್ತು ಆಣೆ ಇದ್ದದ್ದನ್ನು ಎಂಟು ಆಣೆ ಮಾಡಿರುತ್ತೇನೆ.

ತಮ್ಮ ವಿಧೇಯ

ಧಾರವಾಡ.<br>ತಾ. ೨೨-೧೦-೧೯೩೨ } **ಗ. ಹು. ಹೊನ್ನಾಪುರಮಠ.**<br>ಗ್ರಂಥಕರ್ತ.

---

# ಶ್ರೀರಾಮಕೃಷ್ಣ ಪರಮಹಂಸರ ಸಂಕ್ಷಿಪ್ತ ಚರಿತ್ರವು.



ಶ್ರೀರಾಮಕೃಷ್ಣ ಪರಮಹಂಸರು ಶ್ರೀಸ್ವಾಮಿ ವಿವೇಕಾನಂದರ ಗುರುಗಳು. ನಮ್ಮ ಭರತಖಂಡದಲ್ಲಿ ಅರ್ವಾಚೀನ ಕಾಲದೊಳಗೆ ಆಗಿಹೋದ ಸಾಧುಸಜ್ಜನರಲ್ಲಿ ಶ್ರೀರಾಮಕೃಷ್ಣ ಪರಮಹಂಸರು, ಶ್ರೀಸ್ವಾಮಿ ವಿವೇಕಾನಂದರು ಮತ್ತು ಶ್ರೀಸ್ವಾಮಿ ರಾಮತೀರ್ಥರು ಮುಖ್ಯರೆಂಬುವದನ್ನು ನಿಸ್ಸಂದೇಹವಾಗಿ ಹೇಳಬಹುದು. ಶ್ರೀಸ್ವಾಮಿ ರಾಮಕೃಷ್ಣ ಪರಮಹಂಸರು ಬಂಗಾಲದೇಶದ ಒಬ್ಬ ಶ್ರೇಷ್ಠ ಯೋಗಿಗಳಿದ್ದರು. ಇವರಿಗೆ ಎಲ್ಲ ಯೋಗಶಕ್ತಿಗಳು ಚನ್ನಾಗಿ ಗೊತ್ತಿದ್ದರೂ ಇವರು ಎಂದಿಗೂ ಸಿದ್ಧಿಯ ಚಮತ್ಕಾರಗಳನ್ನು ಮಾಡಿ ತೋರಿಸಲಿಲ್ಲ. ಇವರು ಪರಮೇಶ್ವರನ ದೊಡ್ಡ ಭಕ್ತರಿದ್ದರು. ಇವರು ಆರ್ಯಧರ್ಮದ ರಹಸ್ಯವನ್ನು ಚನ್ನಾಗಿ ತಿಳಿದುಕೊಂಡಂತೆಯೇ ಕ್ರಿಸ್ತೀ ಮತ್ತು ಮಹಮ್ಮದೀ ಧರ್ಮಗಳ ರಹಸ್ಯವನ್ನು ಸಹ ಚನ್ನಾಗಿ ತಿಳಿದುಕೊಂಡಿದ್ದರು. ಇವರು ಪರಮೇಶ್ವರನು ಸರ್ವವ್ಯಾಪಿಯಿರುತ್ತಾನೆಂಬ ಪೂರ್ಣ ವಿಶ್ವಾಸದಿಂದ ಆತನಿಗೆ ತಮ್ಮ ಭಕ್ತಿಯನ್ನರ್ಪಿಸುತ್ತಿದ್ದರು. ಆದುದರಿಂದ ಇವರು ಶ್ರೀವಿಷ್ಣುವಿನನ್ನು ಪ್ರಸನ್ನ ಮಾಡಿಕೊಂಡಂತೆಯೇ ಕ್ರಿಸ್ತನನ್ನೂ ಮುಹಮ್ಮದನನ್ನೂ ಪ್ರಸನ್ನ ಮಾಡಿಕೊಂಡಿದ್ದರು. ಇವರ ದರ್ಶನಕ್ಕಾಗಿಯೂ ಇವರ ಉಪದೇಶಾಮೃತವನ್ನು ಕೇಳಿಕೊಳ್ಳುವದಕ್ಕಾಗಿಯೂ ದೂರದೂರಿನ ಜನರು ಇವರ ಕಡೆಗೆ ಬರುತ್ತಿದ್ದರು. ಇವರ ಕಾಲಕ್ಕೆ ಪ್ರಾರ್ಥನಾ ಸಮಾಜದ ಸ್ಥಾಪಕರೂ ಮೂರ್ತಿಪೂಜಾ ನಿಷೇಧಕರೂ ಆಗಿದ್ದ ಪ್ರಸಿದ್ಧ ಬಾಬು ಕೇಶವ ಚಂದ್ರಸೇನರು ದಕ್ಷಿಣೇಶ್ವರದಿಂದ ಎರಡು ಮೈಲು ದೂರಿರುವ ಬೇಲಗಡಿಯೆಂಬಲ್ಲಿ ಶಾಂತಿ ಗೃಹವನ್ನು ಕಟ್ಟಿಕೊಂಡು ಈಶ್ವರ ಪ್ರಾರ್ಥನೆಯನ್ನು ಮಾಡುತ್ತ ಇರುತ್ತಿದ್ದರು. ಅವರು ಆ ಕಾಲಕ್ಕೆ ದೊಡ್ಡ ಸಾಧುಗಳೆಂದು ಹೆಸರುವಾಸಿಯಾಗಿದ್ದರು. ಶ್ರೀರಾಮಕೃಷ್ಣರು ಒಮ್ಮೆ ಬಾಬು ಕೇಶವ ಚಂದ್ರಸೇನರನ್ನು ಕಾಣಲಿಕ್ಕೆ ಬೇಲಗಡಿಗೆ ಹೋಗಿ ಅವರ ಕೂಡ ಎಷ್ಟೋ ಹೊತ್ತಿನವರೆಗೆ ಪಾರಮಾರ್ಥಿಕ ವಿಷ

ಬಿಡಿಸಿ ಅದನ್ನು ಇವರ ಸೋದರಳಿಯಗೆ ಒಪ್ಪಿಸಿದರು. ಆದರೂ ಮಥುರಾ ದಾಸರ ಪ್ರೀತಿಯು ಇವರ ಮೇಲೆ ಕಡಿಮೆಯಾಗಿದ್ದಿಲ್ಲ. ಅವರು ಇವರಿಗೆ ಯಾವಾಗಲು ‘ಪಿತಾಜಿ’ ಎಂದು ಅನ್ನುತ್ತಿದ್ದರು. ಇವರ ಮದುವೆಯಾದಾಗ್ಯೂ ಇವರಿಗೆ ಮದುವೆಯಾದ ಅರವು ಇದ್ದಿಲ್ಲ. ಇವರ ಹೆಂಡತಿಯು ೧೬ ವರ್ಷದ ಪ್ರಾಯದವಳಾಗಿ ಇವರ ಕಡೆಗೆ ಬಂದಾಗ್ಗೆ ಇವರು ಅವಳನ್ನು ಬಹಳ ಸನ್ಮಾನಪೂರ್ವಕವಾಗಿ ಬರಮಾಡಿಕೊಂಡು ಅವಳಿಗೆ–“ಮೊದಲಿನ ರಾಮಕೃಷ್ಣನು ಸತ್ತನು. ನಾನು ಹೊಸ ರಾಮಕೃಷ್ಣನು ಇರುತ್ತೇನೆ. ನನಗೆ ಜಗತ್ತಿನೊಳಗಿನ ಹೆಂಗಸರೆಲ್ಲ ತಾಯಿಯ ಸಮಾನರಿರುತ್ತಾರೆ” ಎಂದು ಹೇಳಿದರು. ಇದನ್ನು ಕೇಳಿ ಆ ಸಾಧ್ವೀಮಣಿಯಾದ ಶಾರದಾದೇವಿಯು ಇವರ ಮುಂದೆ ಕೈಜೋಡಿಸಿ–“ನಿಮ್ಮ ಅಪ್ಪಣೆಯು ನನಗೆ ಮಾನ್ಯವಿರುತ್ತದೆ. ಆದರೆ ನಿಮಗೆ ಅಡಿಗೆಯನ್ನು ಮಾಡಿ ಬಡಿಸಲಿಕ್ಕೂ ಇತರ ಸೇವೆಯನ್ನು ಮಾಡಲಿಕ್ಕೂ ಅಪ್ಪಣೆಯನ್ನು ಕೊಡಬೇಕು” ಎಂದು ಬೇಡಿಕೊಂಡಳು. ಅದಕ್ಕೆ ಇವರು ಒಪ್ಪಿಕೊಂಡದ್ದರಿಂದ ಅವಳು ಅಲ್ಲಿಯೇ ನಿಂತುಕೊಂಡು ಪತಿಯ ಸೇವೆಯನ್ನು ಮಾಡಹತ್ತಿದಳು. ಕಡೆಯತನಕ ಅವರಿಬ್ಬರೂ ತಮ್ಮ ದೃಢನಿಶ್ಚಯವನ್ನು ಬಿಡಲಿಲ್ಲ. ಹಾಗೂ ಶಾರದಾದೇವಿಯು ಪತಿಯ ಅಜ್ಞೆಯನ್ನು ಎಂದೂ ಮೀರಿ ನಡೆಯಲಿಲ್ಲ. ಇವರಾದರೂ ಅವಳ ಮೇಲೆ ಜಗಜ್ಜನನಿಯಂತೆ ಪ್ರೇಮ ಮಾಡುತ್ತಿದ್ದರು.

ಇವರಿಗೆ ದುಡ್ಡಿನ ಸಲುವಾಗಿ ಮೊದಲಿನಿಂದಲೂ ಬಹಳ ತಿರಸ್ಕಾರವಿತ್ತು. ಇವರು ಒಂದು ಸಾರೆ ಒಂದು ಮುಷ್ಟಿ ತುಂಬ ಮಣ್ಣನ್ನೂ ಒಂದು ಮುಷ್ಟಿ ತುಂಬ ಬೆಳ್ಳಿಯ ಚೂರುಗಳನ್ನೂ ಗಂಗಾನದಿಗೆ ತೆಗೆದುಕೊಂಡು ಹೋಗಿ–“ಇವೆರಡರ ಯೋಗ್ಯತೆಯು ಅಷ್ಟೇ ಇರುತ್ತದೆ” ಎಂದು ಆ ನದಿಯಲ್ಲಿ ಚಲ್ಲಿಕೊಟ್ಟರು. ಅಂದಿನಿಂದ ಇವರು ದುಡ್ಡನ್ನು ಕೈಯಿಂದ ಸಹ ಮುಟ್ಟಲಿಲ್ಲ. ರಾಣಿರಾಸಮೋನಿಯವರ ಅಳಿಯರಾದ ಮಥುರಾದಾಸರು ಒಂದುಸಾರೆ ಒಂದು ಸಾವಿರ ರೂಪಾಯಿ ಬೆಲೆ ಬಾಳುವ ಜರದ ಶಾಲನ್ನು ತಂದು ಇವರ ಮೈಮೇಲೆ ಹೊದಿಸಿದರು. ಆಗ ಇವರು ಆ ಶಾಲನ್ನು ತೆಗೆದುಕೊಂಡು ಅದರಿಂದ ತಮ್ಮ ಸುತ್ತುಮುತ್ತಲಿನ ಕಸವನ್ನು ಉಡುಗಿ ಮಥುರಾದಾಸರಿಗೆ–“ಇವೆಲ್ಲ ಪದಾರ್ಥ

ಗಳು ಒಣ ಜಂಭವನ್ನು ಬೆಳೆಸುತ್ತವೆ. ನಿಜವಾಗಿ ಹರಕು ಅರಿವೆಯು ತುಂಡಿನಲ್ಲಿಯೂ ಈ ಜರದ ಶಾಲಿನಲ್ಲಿಯೂ ಏನೂ ಭೇದವಿರುವದಿಲ್ಲ" ಎಂದು ಹೇಳಿದರು. ಇನ್ನೊಮ್ಮೆ ಮಥುರಾದಾಸರು ಕಾಲಿಕಾದೇವಾಯುಲದ ೨೫ ಸಾವಿರ ರೂಪಾಯಿಗಳ ವಾರ್ಷಿಕ ಉತ್ಪನ್ನವನ್ನು ಇವರ ಹೆಸರಿನಿಂದ ಮಾಡಿಕೊಡುತ್ತೇವೆಂದು ಇವರ ಮುಂದೆ ತಿಳುಹಿಸಿದರು. ಆಗ ಇವರು ಮಥುರಾದಾಸರಿಗೆ— "ನೀವು ಈ ಪ್ರಕಾರ ಇನ್ನೊಮ್ಮೆ ಮಾತು ತೆಗೆದರೆ ನಾನು ಇಲ್ಲಿಂದ ಬಿಟ್ಟು ಹೋಗುವೆನು" ಎಂದು ಹೇಳಿದರು. ಮತ್ತೊಮ್ಮೆ ಒಬ್ಬ ಶ್ರೀಮಂತ ಮಾರವಾಡಿಯು ಇವರ ಹೆಸರಿನಿಂದ ಕೆಲವು ಸಾವಿರ ರೂಪಾಯಿಗಳನ್ನು ಧರ್ಮಾರ್ಥ ಕಾರ್ಯಗಳ ಸಲುವಾಗಿ ಒಂದು ಬ್ಯಾಂಕಿನಲ್ಲಿಡುತ್ತೇನೆಂದು ಹೇಳಲು ಇವರು ಅದನ್ನು ತಾವು ಸ್ವೀಕರಿಸಲಾರೆವೆಂದು ಸ್ಪಷ್ಟವಾಗಿ ಉತ್ತರಕೊಟ್ಟರು.

ಈ ಪ್ರಕಾರ ಇವರು ಕನಕ ಮತ್ತು ಕಾಂತಾ ಇವುಗಳನ್ನು ತುಚ್ಛ ಮಾಡಿದ್ದರು. ಇವರಿಗೆ ಪರಮೇಶ್ವರನ ಸಾಕ್ಷಾತ್ಕಾರವಾಗಿತ್ತು. ಇವರ ತಂದೆಯಾದ ಖುದಿರಾಮರು ಗಯೆಯ ಯಾತ್ರೆಯನ್ನು ಮಾಡಲಿಕ್ಕೆ ಹೋದಾಗ್ಗೆ ಶ್ರೀವಿಷ್ಣುವು ಅವರ ಕನಸಿನಲ್ಲಿ—"ನಾನು ನಿಮ್ಮ ಹೊಟ್ಟೆಯಿಂದ ಹುಟ್ಟಿ ಬರುತ್ತೇನೆ" ಎಂದು ಹೇಳಿದ್ದನು. ಆದುದರಿಂದ ಇವರ ತಂದೆತಾಯಿಗಳು ಇವರಿಗೆ ಗದಾಧರನೆಂದು ಹೆಸರಿಟ್ಟಿದ್ದರು. ಮುಂದೆ ಜನರು ಇವರಿಗೆ 'ರಾಮಕೃಷ್ಣ' ಎಂದು ಕರೆಯಹತ್ತಿದರು. ಈ ಪ್ರಕಾರ ಇವರು ಭಗವಂತನ ಅವತಾರವನ್ನೆತ್ತಿ, ತಮ್ಮ ಆತ್ಮಜ್ಯೋತಿಯನ್ನು ಬೆಳಗಿ, ತಮ್ಮ ಪ್ರಭಾವವನ್ನೂ ಕೀರ್ತಿಯನ್ನೂ ಬರೀ ಭರತಖಂಡದಲ್ಲಿ ಅಲ್ಲ, ಇಡೀ ಭೂಮಂಡಲದಲ್ಲಿ ಹರಡಿದರು. ಇವರ ಅವತಾರದ ಕಾಲದಲ್ಲಿ ಸಂಭವಿಸಿದ ಪ್ರತಿಯೊಂದು ಸಂಗತಿಯೂ ಇವರ ಬಾಯಿಯಿಂದ ಬಂದ ಪ್ರತಿಯೊಂದು ಕಥೆಯೂ ಇಡೀ ಮಾನವೀ ಜಾತಿಯ ಹಿತಾರ್ಥವಾಗಿ ಮಾಡಲ್ಪಟ್ಟ ಅತಿ ಉಚ್ಚತರವಾದ ಸುಬೋಧ ಪರಿಮಳದಿಂದ ತುಂಬಿ ತುಳುಕುತ್ತವೆಂದು ಹೇಳಲಿಕ್ಕೆ ಏನೂ ಸಂದೇಹವಿಲ್ಲ.

ಇವರು ಸನ್ನ ೧೮೩೩ ನೇ ಇಸ್ವಿಯಲ್ಲಿ ಅವತಾರವನ್ನೆತ್ತಿ ಸನ್ನ ೧೮೮೬ ನೇ ಇಸವಿ ಆಗಸ್ಟ ತಿಂಗಳದ ೧೬ ನೇ ತಾರೀಖಿನ ದಿವಸ ದೈವೀಭೂತರಾದರು. ಇವರ ಬಗ್ಗೆ ಜರ್ಮನಿಯ ಪ್ರಸಿದ್ಧ ಸಂಸ್ಕೃತ ಪಂಡಿತರೂ ವೇದಶಾಸ್ತ್ರ ಪಾರಂ

ಗತರೂ ಆದ ಪ್ರೊಫೆಸರ ಮ್ಯಾಕ್ಸಮುಲ್ಲರರು ಮತ್ತು ಇತರ ಪಾಶ್ಚಿಮಾತ್ಯ ಪಂಡಿತರು ಬಹಳ ಪೂಜ್ಯಬುದ್ಧಿಯನ್ನು ವಹಿಸಿ ಇವರ ಚರಿತ್ರಗಳನ್ನು ತಮ್ಮ ತಮ್ಮ ಭಾಷೆಗಳಲ್ಲಿ ಮುದ್ರಿಸಿ ತಮ್ಮ ಸ್ವದೇಶಬಾಂಧವರ ಮುಂದೆ ಅವರ ಸ್ತುತಿ ಸ್ತೋತ್ರಗಳನ್ನು ವಿಶೇಷವಾಗಿ ಮಾಡಿರುತ್ತಾರೆ. ಸ್ವಾಮಿ ಶ್ರದ್ಧಾನಂದರು 'ಶ್ರೀರಾಮಕೃಷ್ಣ ಲೀಲಾಪ್ರಸಂಗ' ಎಂಬ ಬಂಗಾಲಿ ಗ್ರಂಥದಲ್ಲಿ ಶ್ರೀಪರಮ ಹಂಸರ ಬಗ್ಗೆ ಬರೆಯುವಾಗ್ಗೆ–"ಇವರಲ್ಲಿ ಸದ್ಗುರುವಿನ ಕುರುಹುಗಳು ಇವರ ಜೀವನದ ಯಾವತ್ತು ಅವಸ್ಥೆಗಳಲ್ಲಿಯೂ ಉಜ್ವಲವಾಗಿದ್ದವು" ಎಂದು ಬರೆದಿರುತ್ತಾರೆ. ಹಾಗೂ ಮಹಾತ್ಮಾಗಾಂಧಿಯವರು ಶ್ರೀಪರಮಹಂಸರ ಜೀವನ ಚರಿತ್ರವೆಂಬ ಒಂದು ಇಂಗ್ಲಿಷ ಗ್ರಂಥದ ಮುನ್ನುಡಿಯನ್ನು ಬರಯುವಾಗ್ಗೆ– "ಶ್ರೀರಾಮಕೃಷ್ಣರು ದೇವಭಕ್ತಿಯ ಪ್ರತ್ಯಕ್ಷ ಮೂರ್ತಿಯಿದ್ದರು. ಅವರ ಸುಬೋಧ ವಚನಗಳು **ಬ್ರಹ್ಮ ಸತ್ಯಂ ಜಗನ್ಮಿಥ್ಯಾ** ಎಂಬುವದನ್ನು ಎಲ್ಲ ವಾಚಕರಿಗೆ ಮನದಟ್ಟಿಯಾಗುವಂತೆ ಬೋಧಿಸುತ್ತವೆ. ಹಾಗೂ ಅವರ ವಚನ ಗಳು ಬರೀ ಒಬ್ಬ ವಿದ್ವಾನ್ ಗೃಹಸ್ಥನ ಬಾಯಿಂದ ಬಂದ ಉಪದೇಶಗಳಿರದೆ ಅವರ ಸಜೀವ ಗ್ರಂಥದ ಪುಟಗಳೂ ಸ್ವಂತ ಅನುಭವದ ಮಾತುಗಳೂ ಇರು ತ್ತವೆ" ಎಂದು ಬರೆದಿರುತ್ತಾರೆ. ಸಾರಾಂಶ– ಈ ಮಹಾತ್ಮರ ಗುಣಗಳನ್ನೂ ಇವರು ಹೇಳಿದ ಉಪದೇಶಾಮೃತವನ್ನೂ ಎಷ್ಟು ವರ್ಣಿಸಿದರೂ ಕಡಿಮೆಯೇ ಸರಿ. ಆದುದರಿಂದ ಇಂಥ ಜಗದ್ವಿಭೂತಿಗಳ ಸತ್ಕಥೆಗಳನ್ನೂ ಸುಬೋಧ ವಚ ನಗಳನ್ನೂ ಓದುವದು ಮತ್ತು ಕೇಳುವದು ಸುಕೃತಪುಣ್ಯವೆಂದು ನಾವು ಇಲ್ಲಿ ಹೇಳದಿರಲಾರೆವು.

---

# ವಿಷಯಾನುಕ್ರಮಣಿಕೆ.



# ಶ್ರೀರಾಮಕೃಷ್ಣ ಪರಮ ಹಂಸರ ಸತ್ಕಥೆಗಳು.



## ೧. ಒಂದು ಹಾವೂ ಒಬ್ಬ ಸನ್ಯಾಸಿಯೂ.

ಒಂದಾನೊಂದು ಸ್ಥಳದಲ್ಲಿ ಒಂದು ಹಾವು ಇರುತ್ತಿತ್ತು. ಅದು ತನ್ನ ದಾರಿಯಿಂದ ಹೋದವರ ಮೈಮೇಲೆ ಏರಿ ಹೋಗಿ ಅವರನ್ನು ಕಚ್ಚುತ್ತಿತ್ತು. ಇದರಿಂದ ಅವರು ಕೂಡಲೇ ಸಾಯುತ್ತಿದ್ದರು. ಆದಕಾರಣ ಯಾರಿಗೂ ಆ ದಾರಿಯಿಂದ ಹೋಗುವ ಧೈರ್ಯವು ಆಗುತ್ತಿದ್ದಿಲ್ಲ. ಯಾರಾದರೂ ದಾರಿಕಾರರು ಒಮ್ಮೊಮ್ಮೆ ಆ ದಾರಿಯಿಂದ ಹೋಗಲಿಕ್ಕೆ ಹತ್ತಿದರೆ ಅದರ ಸಮೀಪದ ಅಡವಿಯಲ್ಲಿ ದನಗಳನ್ನು ಮೇಯಿಸುತ್ತಿದ್ದ ದನ ಕಾಯುವ ಹುಡುಗರು ಆ ದಾರಿಕಾರರಿಗೆ–"ನೀವು ಈ ದಾರಿಯಿಂದ ಹೋಗಬೇಡಿರಿ. ಇಲ್ಲಿ ಒಂದು ಕೆಟ್ಟ ಹಾವು ಇರುತ್ತದೆ" ಎಂದು ಎಚ್ಚರಿಕೆಯನ್ನು ಕೊಡುತ್ತಿದ್ದರು. ಆದರೆ ಒಂದಾನೊಂದು ದಿವಸ ಒಬ್ಬ ಸನ್ಯಾಸಿಯು ಆ ದಾರಿಯಿಂದ ಹೋಗುವದನ್ನು ದನ ಕಾಯುವ ಒಬ್ಬ ಹುಡುಗನು ಕಂಡು ಅವನ ಬಳಿಗೆ ಲಗುಬಗೆಯಿಂದ ಓಡಿ ಹೋಗಿ ಇದರಂತೆ ಹೇಳಿದನು. ಆಗ ಆ ಸನ್ಯಾಸಿಯು-"ನನಗೇನೂ ಹಾವಿನ ಅಂಜಿಕೆಯು ಇರುವದಿಲ್ಲ. ನನಗೆ ಹಾವಿನ ಬಾಧೆಯಾಗದಂತೆ ಮಂತ್ರ ಮಾಡಲಿಕ್ಕೆ ಚನ್ನಾಗಿ ಬರುತ್ತದೆ" ಎಂದು ಹೇಳಿ ಆ ದಾರಿಯಿಂದ ನಡೆದನು. ಆಗ ಆ ಹಾವು ಸನ್ಯಾಸಿಯ ಹೆಜ್ಜೆಯ ಸಪ್ಪಳವನ್ನು ಕೇಳಿ ತನ್ನ ಹುತ್ತಿನೊಳಗಿಂದ ಹೊರಗೆ ಬಂದು ಅವನನ್ನು ಕಚ್ಚಲಿಕ್ಕೆ ಅವನ ಬೆನ್ನು ಹತ್ತಿತು. ಆಗ ಆ ಸನ್ಯಾಸಿಯು–"ಮಿತ್ರಾ, ನನ್ನನ್ನು ಕಚ್ಚಲು ಬಯಸುವಿಯಾ?" ಎಂದು ಆ ಹಾವಿನ ಮೇಲೆ ಮಂತ್ರ ಪ್ರಯೋಗವನ್ನು ಮಾಡಿದನು. ಇದರಿಂದ

ಆ ಹಾವಿನ ವೀರಾವೇಶವೆಲ್ಲ ಹೊರಟು ಹೋಗಿ ಅದು ತೀರಾ ನಮ್ರವಾಯಿತು. ಆದುದರಿಂದ ಅದು ಆ ಸನ್ಯಾಸಿಗೆ ಏನೂ ಉತ್ತರ ಕೊಡದೆ ಸುಮ್ಮನಾಯಿತು. ಆ ಮೇಲೆ ಆ ಸನ್ಯಾಸಿಯು ಆ ಹಾವಿಗೆ-"ನೀನು ಎರಡನೆಯವರಿಗೆ ಯಾಕೆ ಅಪಾಯ ಮಾಡುತ್ತೀ? ನೀನು ಯಾವಾಗಲು ದೇವರ ಧ್ಯಾನ ಮಾಡು; ಅಂದರೆ ನೀನು ದೇವರ ಮೇಲೆ ಪ್ರೀತಿ ಮಾಡಲಿಕ್ಕೆ ಕಲಿಯುವೆ. ಇದರಿಂದ ಎರಡನೆಯವರಿಗೆ ಅಪಾಯ ಮಾಡುವ ನಿನ್ನ ಅಪೇಕ್ಷೆಯು ಹೋಗುವದು" ಎಂದು ಹೇಳಿ ಅಲ್ಲಿಂದ ಹೊರಟು ಹೋದನು. ಆಗಿನಿಂದ ಆ ಹಾವು ಜನರನ್ನು ಕಚ್ಚುವದನ್ನು ಬಿಟ್ಟಿತು. ಆ ಮೇಲೆ ದನಕಾಯುವ ಹುಡುಗರು ಆ ಹಾವು ಕಚ್ಚುವದಿಲ್ಲವೆಂದು ತಿಳಿದು ಅದನ್ನು ಕಲ್ಲಿನಿಂದ ಹೊಡೆಯಲಿಕ್ಕೆ ಹತ್ತಿದರು. ಆದರೂ ಅದು ನಮ್ರಭಾವದಿಂದ ಇದ್ದು ಅವರಿಗೆ ಏನೂ ಅಪಾಯ ಮಾಡುತ್ತಿದ್ದಿಲ್ಲ. ಇದರಿಂದ ಒಂದು ದಿವಸ ಆ ದನ ಕಾಯುವ ಹುಡುಗರು ಅದರ ಬಾಲ ಹಿಡಿದು ಅದನ್ನು ಗಿಮಿ ಗಿಮಿ ತಿರುಗಿಸಿ ಅನೇಕ ಸಾರೆ ಅದನ್ನು ನೆಲಕ್ಕೆ ಅಪ್ಪಳಿಸಿದರು. ಆಗ ಆ ಹಾವಿನ ಬಾಯಿಂದ ರಕ್ತವು ಬರಲಿಕ್ಕೆ ಹತ್ತಿ ಅದು ಎಚ್ಚರದಪ್ಪಿ ಬಿದ್ದುಕೊಂಡಿತು. ಇದರಿಂದ ಆ ಹಾವು ಸತ್ತಿತೆಂದು ಆ ಹುಡುಗರು ಹೊರಟು ಹೋದರು. ಆ ಮೇಲೆ ರಾತ್ರಿಯ ಕಾಲಕ್ಕೆ ಅದು ಎಚ್ಚರಿಕೆಯ ಮೇಲೆ ಬಂದು ಬಹಳ ಕಷ್ಟದಿಂದ ತನ್ನ ಹುತ್ತಿನಲ್ಲಿ ಹೋಗಿ ಸೇರಿಕೊಂಡಿತು. ಮುಂದೆ ಕೆಲವು ದಿವಸಗಳ ತರುವಾಯ ಆ ಸನ್ಯಾಸಿಯು ಆ ದಾರಿಯಿಂದ ಹಾದು ಹೋಗುವಾಗ ಆ ಹಾವನ್ನು ಹುಡುಕಿದನು. ಅದು ಎಲ್ಲಿಯೂ ಕಾಣಿಸಲಿಲ್ಲ. ಕಡೆಗೆ ದನ ಕಾಯುವ ಹುಡುಗರು ಅದು ಸತ್ತು ಬಹಳ ದಿವಸಗಳಾದವೆಂದು ಹೇಳಿದರು. ಆದರೆ ಆ ಸಾಧುವು ತನ್ನ ಮಂತ್ರಪ್ರಭಾವದಿಂದ ಆ ಹಾವು ಸತ್ತಿರಲಿಕ್ಕಿಲ್ಲವೆಂದು ಪೂರ್ಣವಾಗಿ ವಿಶ್ವಾಸವಿಟ್ಟು ಅದರ ಹುತ್ತಿನ ಹತ್ತರ ಹೋಗಿ ಅದನ್ನು ಕೆಲವು ಹೊತ್ತು ಕೂಗಿದನು. ಆ ಮೇಲೆ ಅದು ತನ್ನ ಹುತ್ತಿನ ಹೊರಗೆ ಬಂದು ತನ್ನ ಗುರುವಿಗೆ ನಮಸ್ಕಾರ ಮಾಡಿತು. ಆಗ ಅವನ ಮತ್ತು ಅದರ ನಡುವೆ ನಡೆದ ಸಂಭಾಷಣವೇನಂದರೆ:—

**ಸನ್ಯಾಸಿ**—ಮಿತ್ರಾ, ಕ್ಷೇಮದಿಂದಿರುವೆಯಾ?

**ಹಾವು**—ಸ್ವಾಮಿಾ, ನಿಮ್ಮ ದಯದಿಂದ ಕ್ಷೇಮದಿಂದಲೂ, ಸುಖದಿಂದಲೂ ಇರುತ್ತೇನೆ.

**ಸನ್ಯಾಸಿ**—ಆದರೆ ನೀನು ಇಷ್ಟು ಯಾಕೆ ಸೊರಗಿರುತ್ತೀ? ನಿನ್ನ ಮೈಯಲ್ಲಿ ಅಸ್ಥಿಪಂಜರಗಳೇ ಕಾಣುತ್ತವಲ್ಲ?

**ಹಾವು**—ಸ್ವಾಮಿಾ, ನೀವು ಅಪ್ಪಣೆ ಮಾಡಿದಂದಿನಿಂದ ನಾನು ಎರಡನೇಯವರನ್ನು ಕಚ್ಚುವದನ್ನು ಬಿಟ್ಟುಕೊಟ್ಟಿರುತ್ತೇನೆ. ಒಣಎಲೆಗಳೂ ಮಣ್ಣೂ ಮಾತ್ರ ನನ್ನ ಆಹಾರವಾಗಿರುತ್ತವೆ. ಆದುದರಿಂದ ನಾನು ಸೊರಗಿರುತ್ತೇನೆ.

**ಸನ್ಯಾಸಿ**—ಈ ಆಹಾರದ ಕಾರಣದಿಂದಲೇ ಮಾತ್ರ ನೀನು ಇಷ್ಟು ಸೊರಗುವ ಕಾರಣವಿಲ್ಲ. ಮತ್ತೇನಾದರೂ ಕಾರಣವಿರಬಹುದು. ಸ್ವಲ್ಪ ವಿಚಾರ ಮಾಡಿ ಹೇಳು.

**ಹಾವು**—ಹಾ! ಈಗ ನನಗೆ ನೆನಪಾಯಿತು. ನನ್ನ ಸ್ವಭಾವದಲ್ಲಿ ಬದಲು ಆಗಿರುತ್ತದೆಂದು ನೋಡಿ ಹುಡುಗರು ನನ್ನನ್ನು ನಿರ್ಜೀವಿಯಾಗುವಂತೆ ಒಮ್ಮೆ ಬಹಳ ಹೊಡೆದರು. ಆದುದರಿಂದ ನಾನು ಸೊರಗಿರುತ್ತೇನೆ.

**ಸನ್ಯಾಸಿ**—ಅಯ್ಯೋ ಪಾಪ! ನಿನ್ನ ಶತ್ರುಗಳು ನಿನಗೆ ಹಿಂಸೆಪಡಿಸಿದಾಗ್ಗೆ ನೀನು ಆತ್ಮರಕ್ಷಣ ಮಾಡಿಕೊಳ್ಳಬೇಕೆಂಬುವದು ನಿನಗೆ ಹೇಗೆ ಗೊತ್ತಾಗಲಿಲ್ಲ? ನಾನು ನಿನಗೆ ಈಶ್ವರನು ಹುಟ್ಟಿಸಿದಂಥ ಯಾವ ಪ್ರಾಣಿಗೂ ಕಚ್ಚಬಾರದೆಂದು ಮಾತ್ರ ಅಪ್ಪಣೆಯನ್ನು ಮಾಡಿದ್ದೆನು. ಆದರೆ ನಿನ್ನನ್ನು ಕೊಲ್ಲಲಿಕ್ಕೆ ಬಂದವರ ಮೇಲೆ ನೀನು ನಿನ್ನ ಹೆಡೆಯನ್ನು ಎತ್ತಿ ಫೂತ್ಕಾರ ಮಾಡಿ ಅವರನ್ನು ನಿನ್ನಿಂದ ದೂರ ಮಾಡಬಾರದೆಂದು ಹೇಳಿದ್ದೆನೋ?

ಇದನ್ನು ಕೇಳಿ ಹಾವು ನಾಚಿಕೊಂಡು ಏನೂ ಉತ್ತರ ಕೊಡದೆ ತನ್ನ ಹುತ್ತನ್ನು ಸೇರಿತು.

## ತಾತ್ಪರ್ಯ.

ಕೇಡು ಮಾಡುವವರಿಗೆ ಪ್ರತಿಕೇಡು ಮಾಡದಿದ್ದರೂ ಅವರನ್ನು ನಿರ್ವೀರ್ಯ ಮಾಡುವ ಶಕ್ತಿಯು ನಮ್ಮಲ್ಲಿ ಇರುತ್ತದೆಂದು ಅವರಿಗೆ ತೋರಿಸಿ, ನಮ್ಮ ರಕ್ಷಣ ಮಾಡಿಕೊಳ್ಳತಕ್ಕದ್ದು. ನಾವು ಎರಡನೇಯವರಿಗೆ ಕೇಡು ಮಾಡದಿ

ದ್ದರೂ ಎದಡನೆಯವರು ನಮಗೆ ಕೇಡು ಮಾಡದಂತೆ ಎಚ್ಚರಿಕೆಯನ್ನು ತೆಗೆದುಕೊಳ್ಳುವದು ಯಾವಾಗಲು ಒಳ್ಳೇದು.

---

## ೨. ನಾರದನ ಗರ್ವಹರಣ.

ಒಂದಾನೊಂದು ಸಾರೆ ನಾರದನಿಗೆ ತಾನು ಎಲ್ಲರಿಗಿಂತ ಹೆಚ್ಚಿನ ಭಗವದ್ಭಕ್ತನೆಂಬ ಗರ್ವವು ಬಂದಿತ್ತು. ಇದನ್ನು ತಿಳಿದುಕೊಂಡು ಒಂದು ದಿವಸ ಶ್ರೀವಿಷ್ಣುವು ಅವನಿಗೆ-“ ನಾರದಾ, ನೀನು ಭೂಲೋಕಕ್ಕೆ ಹೋಗಿ ಬಾ. ಅಲ್ಲಿ ನನ್ನೊಬ್ಬ ದೊಡ್ಡ ಭಕ್ತನಿರುತ್ತಾನೆ. ಅವನನ್ನು ನೀನು ನೋಡಿಕೊಂಡು ಬರುವದು ಬಹಳ ಅಗತ್ಯವಿರುತ್ತದೆ” ಎಂದು ಹೇಳಿದನು. ಇದನ್ನು ಕೇಳಿ ನಾರದನು ಆ ಸ್ಥಳಕ್ಕೆ ಹೋದನು. ಅಲ್ಲಿ ಒಬ್ಬ ಒಕ್ಕಲಿಗನು ಮುಂಜಾನೆ ಎದ್ದ ಕೂಡಲೆ ಒಂದು ಸಾರೆ ಹರಿಯ ನಾಮಸ್ಮರಣ ಮಾಡಿ, ನೇಗಿಲಕ್ಕೆ ಎತ್ತುಗಳನ್ನು ಹೂಡಿಕೊಂಡು ತನ್ನ ಹೊಲಕ್ಕೆ ಹೋಗಿ, ಅಲ್ಲಿ ಹಗಲೆಲ್ಲ ಬದಕು ಮಾಡಿ, ಹೊಲದಿಂದ ತಿರುಗಿ ಬಂದು ತನ್ನ ಊಟ ತೀರಿಸಿಕೊಂಡ ಬಳಿಕ, ಮಲಗಿಕೊಳ್ಳುವ ಕಾಲಕ್ಕೆ ಮತ್ತೊಮ್ಮೆ ಆ ಭಗವಂತನ ಹೆಸರನ್ನು ಸ್ಮರಣ ಮಾಡುತ್ತಿದ್ದನು. ಈ ಪ್ರಕಾರ ಅವನ ನಿತ್ಯದ ಪರಿಪಾಠವಿತ್ತು. ಇದನ್ನು ನೋಡಿ ನಾರದನು-“ ಈ ಒಕ್ಕಲಿಗನಲ್ಲಿ ಇಂಥಾದ್ದೇನು ಭಕ್ತಿಯುಂಟು? ಅವನು ದಿನಾಲು ಎರಡು ಸಾರೆ ಮಾತ್ರ ಭಗವಂತನ ನಾಮಸ್ಮರಣ ಮಾಡುತ್ತಾನೆ. ನಾನು ಅಹೋರಾತ್ರಿ ಆತನ ನಾಮಸಂಕೀರ್ತನ ಮಾಡಿ ಅವನ ಭಜನ ಮಾಡುವಲ್ಲಿ ಮಗ್ನನಾಗಿರುತ್ತಿದ್ದು, ನನಗೆ ಈ ಒಕ್ಕಲಿಗನನ್ನು ನೋಡಿಕೊಂಡು ಬರಲಿಕ್ಕೆ ಭಗವಂತನು ಹೇಳಿದನಲ್ಲ!” ಎಂದು ಆಶ್ಚರ್ಯಪಟ್ಟು ತಿರುಗಿ ಶ್ರೀವಿಷ್ಣುವಿನ ಹತ್ತರ ಹೋಗಿ-“ ದೇವಾ! ನಾನು ನಿಮ್ಮ ಭಕ್ತನನ್ನು ನೋಡಿ ಬಂದೆನು. ಅವನು ದಿವಸಕ್ಕೆ ಎರಡು ಸಾರೆ ಮಾತ್ರ ನಿಮ್ಮ ಧ್ಯಾನ ಮಾಡಿ ಯಾವಾಗಲು ತನ್ನ ಉದ್ಯೋಗ ಮಾಡುವಲ್ಲಿ ತೊಡಗಿರುತ್ತಾನೆ. ಅವನಲ್ಲೇನು ನೀವು ವಿಶೇಷ ಭಕ್ತಿಯನ್ನು ಕಂಡಿರಿ?” ಎಂದು ಕೇಳಿದನು. ಅದಕ್ಕೆ ಭಗವಂತನು-“ ನಾ

ರದಾ, ಈ ಎಣ್ಣೆ ತುಂಬಿದ ಥಾಲಿಯುನ್ನು ತೆಗೆದುಕೊಂಡು ಇದರೊಳಗಿಂದ ಒಂದೂ ತಟಕು ಎಣ್ಣೆಯಿನ್ನು ಚಲ್ಲದಂತೆ ಎಚ್ಚರಿಕೆಯಿಂದ ಊರಲ್ಲೆಲ್ಲ ಪ್ರದಕ್ಷಿಣ ಮಾಡಿಕೊಂಡು ನನ್ನ ಕಡೆಗೆ ತಿರುಗಿ ಬಾ" ಎಂದು ಹೇಳಿದನು. ಅದರಂತೆ ನಾರದನು ಮಾಡಲಾಗಿ ಭಗವಂತನು-"ನಾರದಾ, ಈಹೊತ್ತಿನ ದಿವಸ ಊರಲ್ಲಿ ತಿರುಗಾಡುವಾಗ ನೀನು ನನ್ನ ನಾಮಸ್ಮರಣವನ್ನು ಎಷ್ಟು ಸಾರೆ ಮಾಡಿದೆ?" ಎಂದು ಕೇಳಿದನು. ಅದಕ್ಕೆ ನಾರದನು-"ಪ್ರಭೋ, ನಾನು ಒಂದು ಸಾರೆಯಾದರೂ ನಿಮ್ಮ ನಾಮಸ್ಮರಣವನ್ನು ಮಾಡಲಿಲ್ಲ. ಈ ಥಾಲಿಯೊಳಗಿಂದ ಒಂದು ತಟಕು ಸಹ ಎಣ್ಣೆಯನ್ನು ಚಲ್ಲಬಾರದೆಂದು ನೀವು ಅಪ್ಪಣೆಯನ್ನು ಮಾಡಿದ್ದಿರಿ. ಆದುದರಿಂದ ನಿಮ್ಮ ಅಪ್ಪಣೆಯ ಪ್ರಕಾರ ಒಂದು ತಟಕು ಸಹ ಎಣ್ಣೆಯನ್ನು ಚಲ್ಲಬಾರದೆಂದು ನೀವು ಕೊಟ್ಟ ಎಣ್ಣೆಯ ಥಾಲಿಯ ಕಡೆಗೆ ನನ್ನ ಯಾವತ್ತು ಲಕ್ಷ್ಯವನ್ನು ಕೊಟ್ಟೆನು. ಇಂಥ ಸಮಯದಲ್ಲಿ ನಿಮ್ಮ ನಾಮಸ್ಮರಣವನ್ನು ಮಾಡುವದು ಸಾಧ್ಯವಿದ್ದಿಲ್ಲ" ಎಂದು ಉತ್ತರ ಕೊಟ್ಟನು. ಆಗ ಭಗವಂತನು ನಕ್ಕು-"ಇದೊಂದು ಎಣ್ಣೆಯ ಥಾಲಿಯನ್ನು ತರಬೇಕಾದರೆ ನಿನಗೆ ನನ್ನ ಹೆಸರನ್ನು ಒಂದು ಸಾರೆ ಸಹ ಸ್ಮರಣ ಮಾಡಲಿಕ್ಕೆ ಆಗಲಿಲ್ಲ. ಅಂದ ಮೇಲೆ ದಿನಾಲು ತನ್ನ ಸಂಸಾರದ ಭಾರವನ್ನು ತಲೆಯ ಮೇಲೆ ಹೊತ್ತುಕೊಂಡಿದ್ದ ಒಕ್ಕಲಿಗನು ನನ್ನ ಹೆಸರನ್ನು ದಿನಾಲು ಎರಡು ಸಾರೆ ತಪ್ಪದೆ ನೆನಸುವದು ದೊಡ್ಡದಲ್ಲವೇ?" ಎಂದು ಹೇಳಲು, ನಾರದನು ನಾಚಿಕೊಂಡು ತನ್ನ ಗರ್ವವನ್ನು ಬಿಟ್ಟುಕೊಟ್ಟನು.

## ತಾತ್ಪರ್ಯ.

ಯಾರು ಎಷ್ಟು ಸಾರೆ ದೇವರ ಹೆಸರನ್ನು ತೆಗೆದುಕೊಳ್ಳುತ್ತಾರೆಂಬದರ ಮೇಲೆ ಅವರ ಭಕ್ತಿಯು ಅವಲಂಬಿಸಿರುವದಿಲ್ಲ. ಸಾವಿರಾರು ಕೆಲಸಗಳು ಬಂದರೂ, ಸಾವಿರಾರು ಸಂಕಟಗಳು ಒದಗಿದರೂ, ಯಾರು ತಪ್ಪದೆ ಆತನನ್ನು ನೆನಸುತ್ತಾರೋ ಅವರೇ ನಿಜವಾದ ಭಕ್ತರು. ಭಕ್ತಿಗೆ ಹೊರಗಿನ ಜಂಭವು ಬೇಕಾಗುವದಿಲ್ಲ. ಅದು ನಿಜವಾದ ಅಂತಃಕರಣದಿಂದ ಬರತಕ್ಕದ್ದು.

# ೩. ಭಾಗವತದ ಅರ್ಥವು.

ಒಂದಾನೊಂದು ದಿವಸ ಒಬ್ಬ ವಿದ್ವಾನ್ ಬ್ರಾಹ್ಮಣನು ಒಬ್ಬ ವಿದ್ವಾನ್ ಮತ್ತು ಜ್ಞಾನಸಂಪನ್ನ ರಾಜನ ರಾಜಸಭೆಗೆ ಹೋಗಿ-“ ಎಲೈ ರಾಜನೇ! ನಾನು ಎಲ್ಲ ಧರ್ಮಗ್ರಂಥಗಳಲ್ಲಿ ಬಹಳ ಪ್ರವೀಣನಿರುತ್ತಿದ್ದು ನನಗೆ ಭಾಗವತದ ಅರ್ಥವು ಚನ್ನಾಗಿ ತಿಳಿದಿರುತ್ತದೆ. ಆದುದರಿಂದ ನಾನು ಭಾಗವತವನ್ನು ಹೇಳುತ್ತೇನೆ ಕೇಳು. ನಿನ್ನಂಥವರು ಭಾಗವತವನ್ನು ಅವಶ್ಯವಾಗಿ ಕೇಳತಕ್ಕದ್ದು” ಎಂದು ನುಡಿದನು. ಭಾಗವತವನ್ನು ಚನ್ನಾಗಿ ಓದಿಕೊಂಡು ಅದರ ನಿಜವಾದ ಅರ್ಥವನ್ನು ತಿಳಿದುಕೊಂಡವರು ಈಶ್ವರ ಪ್ರಾಪ್ತಿಯಲ್ಲಿ ತಲ್ಲೀನರಾಗುವರಲ್ಲದೆ ಇತರ ಜನರಂತೆ ದ್ರವ್ಯಪ್ರಾಪ್ತಿಯಗೋಸ್ಕರ ಅಥವಾ ಮಾನ ಪ್ರಾಪ್ತಿಯಗೋಸ್ಕರ ಹೊರಗೆ ಎಂದಿಗೂ ಅಡ್ಡಾಡುವದಿಲ್ಲೆಂಬುವದು ಆ ರಾಜನಿಗೆ ಚನ್ನಾಗಿ ಗೊತ್ತಿತ್ತು. ಆದುದರಿಂದ ಅವನು ಆ ಬ್ರಾಹ್ಮಣನಿಗೆ-“ ಪಂಡಿತನೇ, ನಿನಗೆ ಇನ್ನೂ ಭಾಗವತದ ಅರ್ಥವು ಚನ್ನಾಗಿ ತಿಳಿದಂತೆ ಕಂಡುಬರುವದಿಲ್ಲ. ಆದುದರಿಂದ ನೀನು ಮನೆಗೆ ಹೋಗಿ ಇನ್ನೊಮ್ಮೆ ಭಾಗವತವನ್ನು ಓದಿ ಅದರ ಅರ್ಥವನ್ನು ಚನ್ನಾಗಿ ತಿಳಿದುಕೋ. ನಿನಗೆ ಭಾಗವತದ ಅರ್ಥವು ಚನ್ನಾಗಿ ತಿಳಿದಿರುತ್ತದೆಂದು ನನ್ನ ಮನವರಿಕೆಯಾದ ಬಳಿಕ ನಾನು ನಿನ್ನ ಕಡೆಯಿಂದ ಭಾಗವತವನ್ನು ಅವಶ್ಯವಾಗಿ ಕೇಳುವೆನು” ಎಂದು ಉತ್ತರಕೊಟ್ಟನು. ರಾಜನು ಕೊಟ್ಟ ಉತ್ತರವನ್ನು ಕೇಳಿ ಆ ಬ್ರಾಹ್ಮಣನು-“ ರಾಜನು ಎಂಥ ಹುಚ್ಚನಿರುವನು! ಇವನು ಜ್ಞಾನಿಯೆಂದು ನಾನು ತಿಳಿದುಕೊಂಡದ್ದು ವ್ಯರ್ಥವಿರುತ್ತದೆ. ನಾನು ಇಷ್ಟು ವರ್ಷ ಭಾಗವತವನ್ನು ಅಧ್ಯಯನ ಮಾಡಿದರೂ ನನ್ನಿಂದ ಭಾಗವತವನ್ನು ಕೇಳುವ ಮುಂಚೆಯೇ ನನಗೆ ಅದರ ಅರ್ಥವು ತಿಳಿದಿಲ್ಲವೆನ್ನುತ್ತಾನೆ. ಇದು ಎಂಥ ಆಶ್ಚರ್ಯವು!” ಎಂದು ತನ್ನ ಮನಸ್ಸಿನಲ್ಲಿ ಅಂದುಕೊಂಡು ರಾಜನಿಗೆ ಏನೂ ಉತ್ತರ ಕೊಡದೆ ಖಿನ್ನನಾಗಿ ತನ್ನ ಮನೆಗೆ ಹೋದನು. ಹಾಗೂ ಭಾಗವತವನ್ನು ಪುನಃ ಅಧ್ಯಯನ ಮಾಡಿ ಕೆಲವು ದಿವಸಗಳ ನಂತರ ಪುನಃ ಆ ರಾಜನ ಸಭೆಗೆ ಹೋಗಿ-“ ರಾಜನೇ, ಇನ್ನಾದರೂ ಭಾಗವತವನ್ನು ಕೇಳು. ನನಗೆ ಅದರ ಅರ್ಥವು ಚನ್ನಾಗಿ ತಿಳಿದಿರುತ್ತದೆ” ಎಂದು ಹೇಳಿದನು. ಆಗ ರಾಜನು ಅವನಿಗೆ ಮುಂಚಿನಂತೆ-

“ನಿನಗೆ ಇನ್ನೂ ಭಾಗವತದ ಅರ್ಥವು ಚನ್ನಾಗಿ ತಿಳಿದಿಲ್ಲ. ಮನೆಗೆ ಹೋಗಿ ಇನ್ನೊಮ್ಮೆ ಅದರ ಅಧ್ಯಯನ ಮಾಡು” ಎಂದು ಉತ್ತರ ಕೊಟ್ಟನು. ರಾಜನು ಕೊಟ್ಟ ಅಪಮಾನಕಾರಕ ಉತ್ತರವನ್ನು ಕೇಳಿ ಆ ಬ್ರಾಹ್ಮಣನಿಗೆ ಬಹಳ ಸಿಟ್ಟು ಬಂತು. ಆದರೆ ರಾಜನು ತನಗೆ ತಿರುತಿರುಗಿ ಅದೇ ಉತ್ತರವನ್ನು ಕೊಟ್ಟದ್ದರಿಂದ ಈ ಉತ್ತರದಲ್ಲಿ ಏನಾದರೂ ವಿಶೇಷ ಅರ್ಥವು ಇರಬಹುದೆಂದು ತಿಳಿದು ಪುನಃ ಮನೆಗೆ ಬಂದು ತನ್ನ ಮನೆಯ ಕೋಣೆಯ ಬಾಗಿಲವನ್ನು ಮುಚ್ಚಿಕೊಂಡು ಏಕಾಗ್ರಚಿತ್ತದಿಂದ ಭಾಗವತವನ್ನು ಅಧ್ಯಯನ ಮಾಡಹತ್ತಿದನು. ಅವನು ಆಹಾರ ನಿದ್ರೆಗಳನ್ನು ಮರೆಯುವಷ್ಟು ಅದರ ಅಧ್ಯಯನದಲ್ಲಿ ಮಗ್ನನಾಗಿ ಹೋದನು. ಅವನಿಗೆ ಸೂರ್ಯೋದಯವು ಮತ್ತು ಸೂರ್ಯಾಸ್ತವು ಯಾವಾಗ ಆದವು ಎಂಬುವದರ ಎಚ್ಚರವು ಸಹ ಉಳಿಯಲಿಲ್ಲ. ಈ ಪ್ರಕಾರ ಅವನು ಏಕಾಗ್ರಚಿತ್ತದಿಂದ ಭಾಗವತವನ್ನು ಅಧ್ಯಯನ ಮಾಡಲಾಗಿ ಅವನಿಗೆ ಭಾಗವತದ ನಿಜವಾದ ರಹಸ್ಯವು ತಿಳಿಯಲಿಕ್ಕೆ ಹತ್ತಿ ಅದರ ಪ್ರಕಾಶವು ಅವನ ಅಂತಃಕರಣದ ಮೇಲೆ ಬೀಳಲಿಕ್ಕೆ ಹತ್ತಿತು. ಆದುದರಿಂದ ಅವನಲ್ಲಿ ದ್ರವ್ಯ, ಮರ್ಯಾದೆ, ಇಚ್ಛಾ, ಆಶೆ, ಲೋಭ, ಅಹಂಕಾರ ಇವುಗಳು ಇಲ್ಲದಂತೆ ಆದವು. ಸೂರ್ಯೋದಯವಾದ ಕೂಡಲೆ ಕತ್ತಲೆಯು ಹೊರಟುಹೋಗುವಂತೆ ಅವನ ಅಂತಃಕರಣದಲ್ಲಿ ಜ್ಞಾನಸೂರ್ಯನು ಉದಯವಾದ್ದರಿಂದ ಅವನ ಮನಸ್ಸಿನಲ್ಲಿ ರಾಜನ ದರಬಾರಕ್ಕೆ ತಿರುಗಿ ಹೋಗಬೇಕೆಂಬ ವಿಚಾರವು ಉಳಿಯಲಿಲ್ಲ. ಅವನು ರಾಜನನ್ನು ಪೂರ್ಣವಾಗಿ ಮರೆತನೆಂದರೂ ಅಡ್ಡಿ ಇಲ್ಲ. ಈ ಪ್ರಕಾರದ ಅವನ ಮನಸ್ಸಿನ ಸಿದ್ಧತೆಯು ಆಗಲು ಅವನು ಈಶ್ವರನಿಗೆ ಆತ್ಮಾರ್ಪಣವನ್ನು ಮಾಡಿ ಅಹೋರಾತ್ರಿ ಭಗವಂತನ ಆರಾಧನೆಯಲ್ಲಿ ಮಗ್ನನಾದನು.

ಈ ಪ್ರಕಾರ ಕೆಲವು ದಿವಸಗಳು ಕಳೆದ ಹೋದ ತರುವಾಯ ರಾಜನಿಗೆ ಆ ಬ್ರಾಹ್ಮಣನ ನೆನಪು ಆಯಿತು. “ಇಷ್ಟು ದಿವಸಗಳಾದರೂ ಆ ಬ್ರಾಹ್ಮಣನು ನನ್ನ ಕಡೆಗೆ ತಿರುಗಿ ಬರಲಿಲ್ಲ. ಅವನು ಏನು ಉದ್ಯೋಗವನ್ನು ನಡೆಸಿರುವನೋ ನೋಡೋಣ” ಎಂದು ರಾಜನು ತನ್ನ ಮನಸ್ಸಿನಲ್ಲಿ ವಿಚಾರ ಮಾಡಿ ತನ್ನ ಸಂಗಡ ವಿಶೇಷ ಮಂದಿ ಪರಿಚಾರಕರನ್ನು ಕರೆದುಕೊಳ್ಳದೆ ಆ ಬ್ರಾಹ್ಮಣನ ಮನೆಗೆ ಹೋದಾಗ ಆ ಬ್ರಾಹ್ಮಣನು ಪರಮೇಶ್ವರನ ಧ್ಯಾನದಲ್ಲಿ ನಿಮ

ಗ್ನನಾಗಿದ್ದನು. ಅವನ ಮುಖದ ಮೇಲೆ ಮಾತ್ರವಲ್ಲದೆ ಸರ್ವಾಂಗದ ಮೇಲೆ ಒಂದು ಪ್ರಕಾರದ ದಿವ್ಯ ತೇಜಸ್ಸು ಉಂಟಾಗಿತ್ತು. ರಾಜನು ಆ ಬ್ರಾಹ್ಮಣನ ದೇದೀಪ್ಯಮಾನವಾದ ಮತ್ತು ಗಂಭೀರವಾದ ಮುದ್ರೆಯನ್ನು ನೋಡಿ ಆನಂದ ಪಟ್ಟು ಸದ್ಗದಿತ ಅಂತಃಕರಣದಿಂದ ಅವನನ್ನು ನಮಸ್ಕರಿಸಿ ಬಹಳ ಲೀನತೆ ಯಿಂದ-"ಪಂಡಿತ ಶ್ರೇಷ್ಠನೇ! ಈಗ ಮಾತ್ರ ನಿನಗೆ ಭಾಗವತದ ನಿಜವಾದ ಅರ್ಥವು ತಿಳಿದಿರುವದೆಂದು ನನಗೆ ಪೂರ್ಣವಾಗಿ ಮನವರಿಕೆಯಾಗಿರುತ್ತದೆ. ಇನ್ನು ಮೇಲೆ ನೀನು ದಯಮಾಡಿ ನನ್ನನ್ನು ನಿನ್ನ ಶಿಷ್ಯನಾಗಿ ಮಾಡಿಕೋ" ಎಂದು ನುಡಿದನು. ರಾಜನು ಈ ಪ್ರಕಾರ ಮಾತಾಡಿದ್ದನ್ನು ಕೇಳಿ ಆ ಬ್ರಾಹ್ಮ ಣನು ರಾಜನ ಮೋರೆಯ ಕಡೆಗೆ ಒಂದು ಸಾರೆ ಮಾತ್ರ ನೋಡಿ ಅವನಿಗೆ ಏನೂ ಉತ್ತರ ಕೊಡದೆ ಸುಮ್ಮನಾದನು.

## ತಾತ್ಪರ್ಯ.

ಈಶ್ವರಪ್ರಾಪ್ತಿಯಲ್ಲಿ ಮಗ್ನರಾದವರಿಗೆ ಐಶ್ವರ್ಯವಾಗಲಿ, ಮರ್ಯಾದೆ ಯಾಗಲಿ ಬೇಕಾಗುವದಿಲ್ಲ. ಅವರಿಗೆ ಗುರುತ್ವವು ಸಹ ತುಚ್ಛವೆನಿಸುವದು. ನಾವು ಯಾವದೇ ಗ್ರಂಥವನ್ನು ಅಭ್ಯಾಸ ಮಾಡಿದರೂ ಅದರ ಶಾಬ್ದಿಕ ಅರ್ಥ ವನ್ನು ತಿಳಿದುಕೊಂಡು ತೃಪ್ತರಾಗದೆ ಅದರ ನಿಜವಾದ ಮರ್ಮವನ್ನು ಅಂದರೆ ರಹಸ್ಯವನ್ನು ತಿಳಿದುಕೊಂಡಲ್ಲಿ ನಮಗೆ ಜ್ಞಾನಪ್ರಾಪ್ತಿಯಾಗುವದು.

---

# ೪. ಘಂಟಾ ಕರ್ಣನು.

ಒಂದಾನೊಂದು ಪಟ್ಟಣದಲ್ಲಿ ಒಬ್ಬ ಗೃಹಸ್ಥನು ಶಿವನ ಆರಾಧನೆಯನ್ನು ಮಾಡುತ್ತಿದ್ದನು. ಅವನಂಥ ಶಿವಭಕ್ತನು ಬಹುಶಃ ಎಲ್ಲಿಯೂ ಇರಲಿಕ್ಕಿಲ್ಲ ವೆಂದು ಯಾವಾಗಲು ಜನರು ಅನ್ನುತ್ತಿದ್ದರು. ಆದರೆ ಅವನ ಭಕ್ತಿಯಲ್ಲಿ ಒಂ ದು ದೋಷವಿತ್ತು. ಅದೇನಂದರೆ:— ಅವನು ಶಿವನ ಹೊರತಾಗಿ ಇತರ ಯಾವ ದೇವರನ್ನೂ ಮನ್ನಿಸುತ್ತಿದ್ದಿಲ್ಲ. ಅವನು ಇತರ ದೇವರನ್ನು ಬಹಳ ತಿರಸ್ಕಾರ ಮಾಡುತ್ತಿದ್ದನು. ಅವನಿಗೆ ಕೈಲಾಸನಾಥನಾದ ಶ್ರೀಶಂಕರನು ಒಂದು ದಿವಸ

ಪ್ರತ್ಯಕ್ಷನಾಗಿ-“ಭಕ್ತಾ! ಎಲ್ಲ ದೈವತಗಳು ಒಂದೇ ಇರುತ್ತವೆಂದು ತಿಳಿ. ಆದುದರಿಂದ ನೀನು ಯಾವ ದೇವರಿಗಾದರೂ ತಿರಸ್ಕಾರ ಅಥವಾ ಉಪಹಾಸ ಮಾಡಿದರೆ ನೀನು ಪ್ರತ್ಯಕ್ಷ ನನಗೆ ಆ ಪ್ರಕಾರ ಮಾಡಿದಂತೆ ಆಗುವದು. ನಾನು ಇತರ ದೇವರಿಂದ ಭಿನ್ನವಿರುವದಿಲ್ಲ. ಆದುದರಿಂದ ನೀನು ಯಾವಲ್ಲಿಯವರೆಗೆ ಇತರ ದೇವರಿಗೆ ಭಕ್ತಿಪೂರ್ವಕವಾಗಿ ಶರಣು ಹೋಗುವದಿಲ್ಲವೋ ಅಥವಾ ಆ ದೇವರ ವಿಷಯದಲ್ಲಿ ಪೂಜ್ಯಬುದ್ಧಿಯನ್ನು ತಾಳುವದಿಲ್ಲವೋ ಅಲ್ಲಿಯವರೆಗೆ ನಾನು ನಿನ್ನ ಮೇಲೆ ಸಂತುಷ್ಟನಾಗುವದಿಲ್ಲ. ಹಾಗೂ ನಿನ್ನ ಮೇಲೆ ದಯವನ್ನು ತೋರಿಸುವದಿಲ್ಲ” ಎಂದು ಹೇಳಿ ಅಂತರ್ಧಾನವನ್ನು ಹೊಂದಿದನು. ಭಗವಾನ್ ಶಂಕರನು ಈ ಪ್ರಕಾರ ಎಚ್ಚರಿಕೆಯನ್ನು ಕೊಟ್ಟರೂ ಆ ಮನುಷ್ಯನು ದುರಾಗ್ರಹದಿಂದ ಇತರ ದೇವರನ್ನು ಬಹಿರಂಗವಾಗಿ ಮೊದಲಿನಕಿಂತ ಹೆಚ್ಚು ತಿರಸ್ಕಾರ ಮಾಡಹತ್ತಿದನು. ಇದನ್ನು ನೋಡಿ ಶ್ರೀ ಶಂಕರನು ಮತ್ತೊಮ್ಮೆ ಅವನಿಗೆ ಹರಿಹರ ರೂಪವನ್ನು ಧರಿಸಿ ದರ್ಶನವನ್ನು ಕೊಟ್ಟನು. ಆಗ ಅವನು ಹರನ ಹಿಂದೆ ಅಡಗಿಕೊಂಡು ಹರಿಯ ದರ್ಶನವನ್ನು ತೆಗೆದುಕೊಳ್ಳುವದನ್ನು ತಪ್ಪಿಸಹತ್ತಿದನು. ಇಷ್ಟೇ ಅಲ್ಲ, ಅವನು ಮಹಾದೇವರ ಪೂಜೆಯನ್ನು ಮಾಡುವಾಗ ವಿಷ್ಣುವಿನ ಮೋರೆಯ ಕಡೆಗೆ ನೋಡಲೂ ಇಲ್ಲ. ಆದುದರಿಂದ ಶ್ರೀಶಂಕರನು ತನ್ನ ಆ ಭಕ್ತನ ಅಹಂಕಾರವನ್ನೂ ದುರಾಗ್ರಹವನ್ನೂ ನೋಡಿ ಸಿಟ್ಟಿಗೆ ಬಂದು ಮನಸ್ಸಿನೊಳಗೆ ಬಹಳ ನೊಂದುಕೊಂಡು ಅಂತರ್ಧಾನವನ್ನು ಹೊಂದಿದನು. ಇಷ್ಟಾದರೂ ಅವನ ತಾಮಸ ಭಕ್ತಿಯು ತಿಲಮಾತ್ರವಾದರೂ ಕಡಿಮೆಯಾಗಲಿಲ್ಲ. ಅವನು ಮೊದಲಿನಕಿಂತ ಹೆಚ್ಚಾಗಿ ಇತರ ದೇವರನ್ನು ತಿರಸ್ಕಾರ ಮಾಡಲಿಕ್ಕೆ ಹತ್ತಿ ಅವರನ್ನು ಅವಮಾನ ಮಾಡಲಿಕ್ಕೆ ಆರಂಭಿಸಿದನು. ಅವನ ವಿಲಕ್ಷಣ ಸ್ವಭಾವವನ್ನು ಕಂಡು ಊರೊಳಗಿನ ಹುಡುಗರು ಅವನನ್ನು ಸಿಟ್ಟಿಗೆಬ್ಬಿಸುವದಕ್ಕಾಗಿ ಅವನನ್ನು ನೋಡಿದ ಕೂಡಲೆ -“ಶ್ರೀವಿಷ್ಣು, ಗದಾಧರ, ಚತುರ್ಭುಜ, ವೈಕುಂಠನಾಯಕ” ಎಂದು ಅವನ ಮುಂದೆ ದೊಡ್ಡ ಧ್ವನಿಯಿಂದ ಕೂಗಲಾರಂಭಿಸಿದರು. ಈ ಪ್ರಕಾರ ಹುಡುಗರು ಶ್ರೀವಿಷ್ಣುವಿನ ಹೆಸರನ್ನು ತನ್ನ ಮುಂದೆ ಕೂಗಲಿಕ್ಕೆ ಹತ್ತಿದ್ದನ್ನು ಕಂಡು ಅವನಿಗೆ ಬಹಳ ಅಸಹ್ಯವಾಯಿತು. ಆದುದರಿಂದ ಅವನು ತನ್ನ ಮುಂದೆ ಹುಡುಗರು ಶ್ರೀವಿಷ್ಣುವಿನ

ಹೆಸರನ್ನು ತೆಗೆದುಕೊಂಡು ಕೂಗಿದ ಕೂಡಲೆ ಅದು ತನಗೆ ಕೇಳಿಸಬಾರದೆಂದು ತನ್ನ ಎರಡೂ ಕಿವಿಗಳಿಗೆ ಎರಡು ಗಂಟೆಗಳನ್ನು ಕಟ್ಟಿಕೊಂಡು ತನ್ನ ಕಿವಿಗಳಿಂದ ಅವುಗಳನ್ನು ಬಾರಿಸಹತ್ತಿದನು. ಕಡೆಕಡೆಗೆ ಅವನು ಊರೊಳಗೆ ದಾರಿಯಿಂದ ಅಡ್ಡಾಡುವಾಗ ಯಾವಾಗಲು ತನ್ನ ತಲೆಯನ್ನು ಅಗಳಾಡಿಸುತ್ತ ಗಂಟೆಗಳನ್ನು ಬಾರಿಸುತ್ತಿದ್ದನು. ಅವನ ಉದ್ದೇಶವು ತನ್ನ ಕಿವಿಗೆ ಶ್ರೀವಿಷ್ಣುವಿನ ಹೆಸರು ಒಮ್ಮೆಯಾದರೂ ಕೇಳಿಸಬಾರದೆಂದು ಇತ್ತು. ಅವನ ಈ ಹುಚ್ಚುತನವನ್ನು ನೋಡಿ ಜನರು ಅವನಿಗೆ 'ಘಂಟಾಕರ್ಣ' ನೆಂದು ಹೆಸರಿಟ್ಟರು. ಘಂಟಾಕರ್ಣನು ಜೀವಂತವಿರುವಾಗ ತನ್ನ ದುರಾಗ್ರಹದ ಸಲುವಾಗಿ ಅತಿಶಯ ದುಃಖವನ್ನೂ, ಹಿಂಸೆಯನ್ನೂ ಭೋಗಿಸಬೇಕಾಯಿತು. ಇಷ್ಟೇ ಅಲ್ಲ, ಅವನು ಸತ್ತ ಮೇಲೆ ಅವನಿಗೆ ಯಮಲೋಕದಲ್ಲಿ ಸಹ ಯಾತನೆಗಳು ತಪ್ಪಲಿಲ್ಲ. ಬಂಗಾಲದಲ್ಲಿ ಈಗಲೂ ಫಾಲ್ಗುಣ ಮಾಸದಲ್ಲಿ ಒಂದು ದಿವಸ ಜನರು ಘಂಟಾಕರ್ಣನ ಮೂರ್ತಿಯನ್ನು ಮಾಡಿ ತಮ್ಮ ಕೈಯೊಳಗಿನ ಬಡಗಿಯಿಂದ ಅದನ್ನು ಹೊಡ ಹೊಡದು ನಾಶಪಡಿಸುತ್ತಾರೆ. ಇದು ಹರಿಹರರಲ್ಲಿ ಭೇದವನ್ನೆಣಿಸುವ ದುರಾಗ್ರಹದ ಫಲವು.

## ತಾತ್ಪರ್ಯ.

ಪರಮೇಶ್ವರನಿಗೆ ಅನಂತ ಹೆಸರುಗಳು ಮತ್ತು ಅನಂತ ರೂಪಗಳು ಇರುತ್ತವೆ. ನಾವು ಆತನನ್ನು ಬೇಕಾದ ಹೆಸರಿನಿಂದ ಸ್ಮರಣ ಮಾಡಿ, ಬೇಕಾದ ರೂಪದಿಂದ ಮತ್ತು ಬೇಕಾದ ರೀತಿಯಿಂದ ಆರಾಧಿಸಿದರೂ ಅವನು ಸಂತುಷ್ಟನಾಗುವನು. ಆದುದರಿಂದ ಯಾರು ಬೇಕಾದ ದೇವರನ್ನು ಆರಾಧಿಸಿದರೂ ಇತರ ದೇವರನ್ನು ಸರ್ವಥಾ ನಿಂದಿಸಬಾರದು.

---

# ೫. ನಾಲ್ಕು ಮಂದಿ ಕುರುಡರು.

ಒಂದು ಊರೊಳಗೆ ನಾಲ್ಕು ಮಂದಿ ಕುರುಡರು ಇರುತ್ತಿದ್ದರು. ಒಂದು ಸಾರೆ ಆ ಊರ ಇನಾಮದಾರನು ಒಂದು ಆನೆಯನ್ನು ಮಾರಲಿಕ್ಕೆ ತೆಗೆದುಕೊಂಡು ಬಂದನು. ಅದನ್ನು ನೋಡಲಿಕ್ಕೆ ಆ ಊರೊಳಗಿನ ಎಲ್ಲ ಸಣ್ಣ ದೊಡ್ಡ

ಜನರು, ಹೆಂಗಸರು, ಹುಡುಗರು ಸಹ ನೋಡಲಿಕ್ಕೆ ಹೋದರು. ಈ ವರ್ತಮಾನವು ಆ ಊರೊಳಗಿದ್ದ ನಾಲ್ಕು ಮಂದಿ ಕುರುಡರಿಗೆ ತಿಳಿಯಲು, ಅವರೂ ಆನೆಯನ್ನು ನೋಡಲಿಕ್ಕೆ ಹೋದರು. ಆನೆಯಂಥ ದೊಡ್ಡ ಪ್ರಾಣಿಯು ಜಗತ್ತಿನಲ್ಲಿ ಯಾವದೂ ಇಲ್ಲವೆಂದು ಅವರು ಮುಂಚಿತವಾಗಿ ಕೇಳಿದ್ದರಿಂದ ಆನೆಯನ್ನು ನೋಡಿ ಬರಲಿಕ್ಕೆ ಅವರು ಬಹಳ ಉತ್ಕಂಠತೆಯಿಂದ ಹೋದರು. ಆದರೆ ಅವರಿಗೆ ನೋಡಲಿಕ್ಕೆ ಕಣ್ಣುಗಳಿಲ್ಲದ್ದರಿಂದ ಅವರು ಆ ಆನೆಯ ಮೇಲೆ ಕೈಯಾಡಿಸಿ ತಮ್ಮ ಸ್ಪರ್ಶದಿಂದ ಆನೆಯು ಎಂಥ ಪ್ರಾಣಿಯು ಇರುತ್ತದೆಂಬದನ್ನು ತಿಳಿದುಕೊಳ್ಳಬೇಕೆಂದು ಅದರ ಸಮೀಪಕ್ಕೆ ಹೋಗಿ ಅದರ ಮೇಲೆ ತಮ್ಮ ಕೈಯಾಡಿಸಿದರು. ಒಬ್ಬನು ಅದರ ಕಾಲುಗಳ ಮೇಲೆ, ಇನ್ನೊಬ್ಬನು ಅದರ ಸೊಂಡೆಯ ಮೇಲೆ, ಮೂರನೇಯವನು ಅದರ ಹೊಟ್ಟೆಯ ಮೇಲೆ ಮತ್ತು ನಾಲ್ಕನೇಯವನು ಅದರ ಕಿವಿಗಳ ಮೇಲೆ ಕೈಯಾಡಿಸಿದನು. ಈ ಪ್ರಕಾರ ನಾಲ್ಕು ಮಂದಿ ಕುರುಡರು ತಮ್ಮ ತಮ್ಮ ಕೈಯಾಡಿಸಿ ಆನೆಯನ್ನು ನೋಡಿಕೊಂಡು ಮನೆಗೆ ಹೋದನಂತರ ಎಲ್ಲರೂ ಒತ್ತಟ್ಟಿಗೆ ನೆರೆದು ಆನೆಯು ಯಾವ ಪ್ರಕಾರ ಇರುತ್ತದೆಂದು ತಮ್ಮ ತಮ್ಮೊಳಗೆ ವಾದವಿವಾದ ಮಾಡಹತ್ತಿದರು. ಒಬ್ಬರ ಅಭಿಪ್ರಾಯವು ಇನ್ನೊಬ್ಬರ ಅಭಿಪ್ರಾಯಕ್ಕೆ ಕೂಡಲಿಲ್ಲ. ಆನೆಯ ಕಾಲುಗಳ ಮೇಲೆ ಕೈಯಾಡಿಸಿ ನೋಡಿದ ಕುರುಡನು-“ಆನೆಯು ಕಂಬದಂತೆ ಇರುತ್ತದೆ” ಎಂದು ಹೇಳಿದನು. ಅದರ ಸೊಂಡೆಯ ಮೇಲೆ ಕೈಯಾಡಿಸಿದಂಥ ಎರಡನೇ ಕುರುಡನು-“ಆನೆಯು ಒಂದು ತೊಲೆಯು ಮುಂಡಿಗೆಯಂತೆ ಇರುತ್ತದೆ” ಎಂದು ಹೇಳಿದನು. ಅದರ ಹೊಟ್ಟೆಯ ಮೇಲೆ ಕೈಯಾಡಿಸಿ ನೋಡಿದ ಮೂರನೇ ಕುರುಡನು-“ಆನೆಯು ಕೊಡದಂತೆ ಇರುತ್ತದೆ” ಎಂದು ಹೇಳಿದನು. ಅದರ ಕಿವಿಗಳ ಮೇಲೆ ಕೈಯಾಡಿಸಿ ನೋಡಿದಂಥ ನಾಲ್ಕನೇ ಕುರುಡನು-“ಆನೆಯು ಮೊರದಂತೆ ಇರುತ್ತದೆ” ಎಂದು ಹೇಳಿದನು. ಈ ಪ್ರಕಾರ ನಾಲ್ಕು ಮಂದಿ ಕುರುಡರು ಆನೆಯು ಎಂಥಾದ್ದಿರುತ್ತದೆಂಬ ಬಗ್ಗೆ ಬೇರೆ ಬೇರೆ ಮಾತಾಡಿ ತಮ್ಮ ತಮ್ಮೊಳಗೆ ಜಗಳಾಡಲಿಕ್ಕೆ ಹತ್ತಿದರು. ಈ ಪ್ರಕಾರ ಈ ನಾಲ್ಕು ಜನರು ಜಗಳಾಡುವದನ್ನು ಕೇಳಿ ಆ ದಾರಿಯಿಂದ ಹೋಗುತ್ತಿದ್ದ ಒಬ್ಬ ಗೃಹಸ್ಥನು ಅವರ ಒಳಿಗೆ ಬಂದು-“ಅಪ್ಪಗಳಿ

ರಾ! ನೀವು ಯಾಕೆ ಜಗಳಾಡುತ್ತೀರಿ?" ಎಂದು ಕೇಳಿದನು. ಅದಕ್ಕೆ ಆ ನಾಲ್ಕು ಮಂದಿ ಕುರುಡರು ಅವನ ಮುಂದೆ ತಮ್ಮ ಜಗಳದ ಯಾವತ್ತು ಸಂಗತಿಯನ್ನು ತಿಳಿಸಿದರು. ಆ ಕುರುಡರ ಚಮತ್ಕಾರವಾದ ಜಗಳವನ್ನು ಕೇಳಿ ಆ ಗೃಹಸ್ಥನು ನಕ್ಕು-"ಅಪ್ಪಗಳಿರಾ! ನೀವೆಲ್ಲರು ಸುಮ್ಮನೆ ವಾದವಿವಾದವನ್ನು ನಡೆಸಿರುತ್ತೀರಿ. ನಿಮ್ಮಲ್ಲಿ ಒಬ್ಬರೂ ಆನೆಯನ್ನು ಪ್ರತ್ಯಕ್ಷವಾಗಿ ನೋಡಿಲ್ಲ. ನಿಮ್ಮಲ್ಲಿ ಒಬ್ಬನು ಆನೆಯು ಕಂಬದಂತೆ ಇರುತ್ತದೆಂದು ಹೇಳುತ್ತಾನೆ. ಆದರೆ ಆನೆಯ ಕಾಲುಗಳು ಮಾತ್ರ ಕಂಬದಂತೆ ಇರುತ್ತವೆ. ನಿಮ್ಮಲ್ಲಿ ಇನ್ನೊಬ್ಬನು ಆನೆಯು ಮುಂಡಿಗೆಯಂತೆ ಇರುತ್ತದೆಂದು ಹೇಳುತ್ತಾನೆ; ಆದರೆ ಅದರ ಸೊಂಡೆಯು ಮಾತ್ರ ಮುಂಡಿಗೆಯಂತೆ ಇರುತ್ತದೆ. ನಿಮ್ಮಲ್ಲಿ ಮೂರನೇಯವನು ಆನೆಯು ಕೊಡದಂತೆ ಇರುತ್ತದೆಂದು ಹೇಳುತ್ತಾನೆ; ಆದರೆ ಆನೆಯ ಹೊಟ್ಟೆಯು ಮಾತ್ರ ಕೊಡದಂತೆ ಈರುತ್ತದೆ. ಹಾಗೂ ನಿಮ್ಮಲ್ಲಿ ನಾಲ್ಕನೇಯವನು ಆನೆಯು ಮೊರದಂತೆ ಇರುತ್ತದೆಂದು ಹೇಳುತ್ತಾನೆ, ಆದರೆ ಅದರ ಕಿವಿಗಳು ಮಾತ್ರ ಮೊರದಂತೆ ಇರುತ್ತವೆ. ನೀವು ನಾಲ್ಕೂ ಮಂದಿ ಆನೆಯ ಒಂದೊಂದೇ ಭಾಗದ ಮೇಲಿಂದ ಆನೆಯನ್ನು ಪರೀಕ್ಷಿಸಿರುತ್ತೀರಿ. ನಿಮ್ಮಲ್ಲಿ ಯಾರೂ ಆನೆಯನ್ನು ಪೂರ್ಣವಾಗಿ ಪರೀಕ್ಷೆ ಮಾಡಿ ತಿಳಿದುಕೊಂಡಿಲ್ಲ" ಎಂದು ಹೇಳಿ ಆ ನಾಲ್ಕು ಮಂದಿಯನ್ನು ಸಮಾಧಾನ ಮಾಡಿದನು.

### ತಾತ್ಪರ್ಯ.

ಇದೇ ಪ್ರಕಾರ ಜನರು ಪರಮೇಶ್ವರನ ಬಗ್ಗೆ ಜ್ಞಾನವಿರದೆ ಆತನ ಸ್ವರೂಪದ ಬಗ್ಗೆ ಸುಮ್ಮನೆ ವಾದವಿವಾದ ಮಾಡುತ್ತಾರೆ. ಸದ್ಗುರುವಿನ ಸಹಾಯವಿಲ್ಲದೆ ಒಬ್ಬರಿಗೂ ಆತನ ಸ್ವರೂಪವು ಗೊತ್ತಾಗುವದಿಲ್ಲ.

---

## ೬. ಕಾರ್ತಿಕ ಸ್ವಾಮಿಯು.

ಒಂದು ಸಾರೆ ಒಬ್ಬನು ಭಗವಾನ್ ರಾಮಕೃಷ್ಣ ಪರಮಹಂಸರಿಗೆ—"ನಿಮಗೆ ಹೆಂಡತಿಯು ಇದ್ದರೂ ನೀವು ಸಂಸಾರವನ್ನು ಯಾಕೆ ಬಿಟ್ಟಿರುತ್ತೀ

ರಿ?" ಎಂದು ಪ್ರಶ್ನೆ ಮಾಡಿದನು. ಅದಕ್ಕೆ ಉತ್ತರವಾಗಿ ಅವರು ಪಾರ್ವತಿ ದೇವಿಯ ಮಗನಾದ ಕಾರ್ತೀಕಸ್ವಾಮಿಯ ಕಥೆಯನ್ನು ಹೇಳಿದರು. ಅದೇ ನಂದರೆ:—

ಒಂದು ಸಾರೆ ಗಣನಾಯಕನಾದ ಕಾರ್ತೀಕಸ್ವಾಮಿಯು ಆಡುವಾಗ ಒಂದು ಬೆಕ್ಕಿಗೆ ತನ್ನ ಉಗುರುಗಳಿಂದ ಚಿವರಿದನು. ಮುಂದೆ ಅವನು ತನ್ನ ಮನೆಗೆ ಹೋಗಿ ನೋಡಲಾಗಿ ಅವನ ತಾಯಿಯಾದ ಪಾರ್ವತಿಯ ಗಲ್ಲದ ಮೇಲೆ ತಾನು ಚಿವರಿದ ಗುರುತುಗಳು ಮೂಡಿದ್ದವು. ಅವುಗಳನ್ನು ನೋಡಿ ಕಾರ್ತೀಕ ಸ್ವಾಮಿಗೆ ಆಶ್ಚರ್ಯವೆನಿಸಿತು. ಆಗ ಅವನು ಪಾರ್ವತೀದೇವಿಗೆ-"ತಾಯಿಯೇ, ನಿನ್ನ ಗಲ್ಲದ ಮೇಲೆ ಈ ಚಿವರಿದ ಗುರುತುಗಳು ಯಾಕೆ ಮೂಡಿರುತ್ತವೆ?" ಎಂದು ಕೇಳಿದನು. ಅದಕ್ಕೆ ಆ ಜಗದಂಬೆಯು-"ಮಗನೇ, ಇದು ನಿನ್ನದೇ ಕೆಲಸವು. ನಿನ್ನ ಉಗುರುಗಳಿಂದಲೇ ಈ ಚಿವರುಗಳು ಆಗಿರುವವು" ಎಂದು ಉತ್ತರ ಕೊಟ್ಟಳು. ಆಗ ಕಾರ್ತೀಕಸ್ವಾಮಿಯು ಹೆಚ್ಚು ಆಶ್ಚರ್ಯಪಟ್ಟು- "ಅದು ಹೇಗೆ? ನಾನು ನಿನ್ನನ್ನು ಚಿವರಿದ್ದು ನನ್ನ ನೆನಪಿಗೆ ಬರಲೊಲ್ಲದು" ಎಂದು ಕೇಳಿದನು. ಅದಕ್ಕೆ ಪಾರ್ವತಿದೇವಿಯು-"ಬಾಲಕನೇ, ನೀನು ಈಹೊತ್ತು ಮುಂಜಾನೆ ಬೆಕ್ಕಿಗೆ ಏನು ಮಾಡಿದೆಂಬುವದನ್ನು ನೆನಪು ಮಾಡಿಕೋ" ಎಂದು ಹೇಳಿದಳು. ಇದನ್ನು ಕೇಳಿದವನೇ ಕಾರ್ತೀಕಸ್ವಾಮಿಯು ಅತ್ಯಂತ ಆಶ್ಚರ್ಯದಿಂದ ಪಾರ್ವತಿದೇವಿಗೆ-"ಆದರೆ ನಾನು ಬೆಕ್ಕಿಗೆ ಚಿವುರಿದ ಗುರುತುಗಳು ನಿನ್ನ ಗಲ್ಲದ ಮೇಲೆ ಹೇಗೆ ಬಂದವು?" ಎಂದು ಕೇಳಿದನು. ಅದಕ್ಕೆ ಜಗಜ್ಜನನಿಯು-"ಮಗುವೇ, ಈ ಜಗತ್ತಿನೊಳಗೆ ನನ್ನ ಹೊರತು ಏನೂ ಇರುವದಿಲ್ಲ. ಈ ಸೃಷ್ಟಿಯಲ್ಲಿ ನಾನೇ ಇರುತ್ತೇನೆ. ನೀನು ಯಾರಿಗೆ ದುಃಖ ಕೊಟ್ಟರೂ ಆ ದುಃಖವನ್ನು ನಾನೇ ಅನುಭೋಗಿಸಬೇಕಾಗುವದು" ಎಂದು ಉತ್ತರ ಕೊಟ್ಟಳು. ಇದರಿಂದ ಕಾರ್ತೀಕಸ್ವಾಮಿಯು ಪ್ರತಿಯೊಬ್ಬ ಸ್ತ್ರೀಯನ್ನು ತನ್ನ ತಾಯಿಯೆಂದು ತಿಳಿದು ತಾನು ಎಂದಿಗೂ ಮದುವೆ ಮಾಡಿಕೊಳ್ಳಲಿಕ್ಕಿಲ್ಲವೆಂದು ನಿಶ್ಚಯ ಮಾಡಿದನು.

"ಇದೇ ಮೇರೆಗೆ ನಾನಾದರೂ ಪ್ರತಿಯೊಬ್ಬ ಸ್ತ್ರೀಯನ್ನು ನನ್ನ ತಾಯಿಯೆಂದು ತಿಳಿಯುತ್ತೇನೆ" ಎಂದು ಭಗವಾನರು ಉತ್ತರ ಕೊಟ್ಟರು.

### ತಾತ್ಪರ್ಯ.

ಭಗವದ್ಧ್ಯಾನದಲ್ಲಿ ನಿಮಗ್ನರಾಗಿ ಭಗವಂತನ ಸಾಕ್ಷಾತ್ಕಾರವನ್ನು ಮಾಡಿಕೊಂಡವರು ಸಂಸಾರವನ್ನು ತುಚ್ಛ ಮಾಡುತ್ತಾರೆ. ಅವರು "ನಾನು, ನನ್ನ ಹೆಂಡತಿ, ನನ್ನ ಮಕ್ಕಳು" ಎಂಬ ಭೇದವನ್ನು ಮಾಡುವದಿಲ್ಲ. ಎಲ್ಲ ಪುರುಷರು ತಮ್ಮ ಅಣ್ಣತಮ್ಮಂದಿರೆಂತಲೂ, ಎಲ್ಲ ಸ್ತ್ರೀಯರು ತಮ್ಮ ಅಕ್ಕತಂಗಿಯರೆಂತಲೂ ತಿಳಿದುಕೊಂಡು ಅವರೊಡನೆ ಶುದ್ಧಭಾವದಿಂದ ನಡೆಯುತ್ತಾರೆ.

---

## ೭. ಮೀನ ಮಾರುವ ಹೆಂಗಸರು.

ಕೆಲವು ಮೀನ ಮಾರುವ ಹೆಂಗಸರು ಒಂದು ದಿವಸ ತಮ್ಮ ಮೀನಗಳ ಮಾರಾಟದ ಸಲುವಾಗಿ ಪರಸ್ಥಳದ ಸಂತೆಗೆ ಹೋಗಿ ಸಂಜೆಯ ಹೊತ್ತಿನಲ್ಲಿ ತಮ್ಮ ತೆರವಾದ ಬುಟ್ಟಿಗಳನ್ನು ತಲೆಯ ಮೇಲೆ ಇಟ್ಟುಕೊಂಡು ತಮ್ಮ ಊರಿಗೆ ಬರುತ್ತಿದ್ದರು. ಆಗ ದೊಡ್ಡ ಅಶೇಕಲ್ಲಿನ ಮಳೆಯು ಸುರಿಯಿತು. ಆದುದರಿಂದ ಅವರು ಆ ಮಳೆಯೊಳಗೆ ಸಿಕ್ಕು ತಮ್ಮ ಊರಿಗೆ ಬರಲಾರದೆ ಆ ರಾತ್ರಿ ದಾರಿಯೊಳಗಿದ್ದ ಒಬ್ಬ ಹೂಗಾರವನ ಮನೆಯಲ್ಲಿ ಇಳಕೊಂಡರು. ಆ ಹೂಗಾರವನು ಅವರಿಗೆ ಇರಲಿಕ್ಕೆ ಒಂದು ಕೋಣೆಯನ್ನು ಕೊಟ್ಟನು. ಆದರೆ ಆ ಕೋಣೆಯಲ್ಲಿ ಅವನು ಹೂವುಗಳನ್ನು ಇಟ್ಟಿದ್ದ ಕಾರಣ ಆ ಹೂವುಗಳ ಸುವಾಸನೆಯು ಆ ಕೋಣೆಯಲ್ಲಿ ತುಂಬಿ ಹೋಗಿತ್ತು. ಇದರಿಂದ ಆ ಮೀನ ಮಾರುವ ಹೆಂಗಸರಿಗೆ ಸ್ವಲ್ಪ ಸಹ ನಿದ್ರೆಯು ಹತ್ತಲಿಲ್ಲ. ಆಗ ಅವರಲ್ಲಿ ಒಬ್ಬ ಜಾಣೆಯಾದ ಹೆಂಗಸು—"ನಾವು ನಮ್ಮ ನಮ್ಮ ಬುಟ್ಟಿಗಳ ಮೇಲೆ ಸ್ವಲ್ಪ ನೀರು ಹಾಕಿ ಅವುಗಳನ್ನು ನಮ್ಮ ಸಮೀಪದಲ್ಲಿ ಇಟ್ಟುಕೊಂಡು ಮಲಗೋಣ. ಅಂದರೆ ಈ ಹೂವುಗಳ ವಾಸನೆಯ ತ್ರಾಸದಿಂದ ನಮ್ಮ ನಿದ್ರೆಯು ಕೆಡಲಿಕ್ಕಿಲ್ಲ" ಎಂದು ಹೇಳಿದಳು. ಇದಕ್ಕೆ ಎಲ್ಲರು ಸಂತೋಷದಿಂದ ಒಪ್ಪಿಕೊಂಡು ಅದರಂತೆ ಮಾಡಿದರು. ಆಗ ಅವರಿಗೆ ಬೇಗನೆ ನಿದ್ರೆಯು ಹತ್ತಿ ಅವರು ಗೊರ್ರ ಗೊರ್ರೆಂದು ಚನ್ನಾಗಿ ನಿದ್ರೆ ಮಾಡಿದರು.

**ತಾತ್ಪರ್ಯ.**

ಕಲಿತದ್ದು ಕಲ್ಲು ಹಾಕಿದರೂ ಹೋಗದು. ಮನುಷ್ಯನಿಗೆ ಒಮ್ಮೆ ಯಾವದಾದರೂ ರೂಢಿಯು ಸೇರಿದರೆ ಅದನ್ನು ಬಿಡುವದು ಅವನಿಗೆ ಬಹಳ ಕಷ್ಟವಾಗುವದು. ಮನುಷ್ಯನು ಯಾವಾಗಲು ಈ ರೂಢಿಯು ಬಲುಮೆಗೆ ಒಳಪಟ್ಟು ನಿರ್ವಿಣ್ಣನಾಗುತ್ತಾನೆ. ಇದರಂತೆಯೇ ಸಂಸಾರ ಲಂಪಟರಾದ ಜನರು ದ್ರವ್ಯ ಸಂಪಾದನೆಯು ಮತ್ತು ಸುಖಾಭಿಲಾಷೆಯ ವಿಚಾರಗಳಲ್ಲಿ ಮಗ್ನರಾಗಿರುವದರಿಂದ ಅವರಿಗೆ ಶುದ್ಧವುಳ್ಳ ವೈರಾಗ್ಯದ ವಾತಾವರಣದಲ್ಲಿ ಇರಬೇಕಾದರೆ ಬಹಳ ಕಷ್ಟವಿಸಿಯೂ ತೊಂದರೆಯೂ ಆಗುವವು.

---

## ೮. ಒಬ್ಬ ಬ್ರಾಹ್ಮಣನ ಗೋಹತ್ಯವು.

ಒಬ್ಬ ಬ್ರಾಹ್ಮಣನು ಬಹಳ ಶ್ರಮ ಮಾಡಿ ಒಂದು ಸುಂದರವಾದ ತೋಟವನ್ನು ಸಿದ್ಧ ಮಾಡಿದ್ದನು. ಅದರಲ್ಲಿ ಅವನು ಅನೇಕ ತರದ ಹೂವಿನ ಮತ್ತು ಹಣ್ಣಿನ ಗಿಡಗಳನ್ನು ಹಚ್ಚಿ ಅವುಗಳನ್ನು ಬಹಳ ಪ್ರೀತಿಯಿಂದ ಜೋಕೆ ಮಾಡುತ್ತಿದ್ದನು. ಹೀಗಿರಲು ಒಂದು ದಿವಸ ಒಂದು ಆಕಳು ಅವನ ಕಣ್ಣು ತಪ್ಪಿಸಿ ಆ ತೋಟವನ್ನು ಹೊಕ್ಕು ಅವನು ಪ್ರೀತಿಯಿಂದ ಹಚ್ಚಿ ಬೆಳೆಸಿದ ಒಂದು ಬಹಳ ಅಮೌಲ್ಯವಾದ ಮಾವಿನ ಸಸಿಯನ್ನು ತಿಂದಿತು. ಇದನ್ನು ಕಂಡು ಆ ಬ್ರಾಹ್ಮಣನು ಸಿಟ್ಟಿಗೆದ್ದು ಆ ಆಕಳವನ್ನು ತನ್ನ ಕೋಲಿನಿಂದ ಒಳಿತಾಗಿ ಹೊಡೆಯಲು ಅದು ಆ ಕೋಲಿನ ಪೆಟ್ಟಿನಿಂದ ಸತ್ತು ಬಿದ್ದಿತು. ಆ ಬಳಿಕ ಈ ಗೋಹತ್ಯದ ವರ್ತಮಾನವು ಹಾ ಹಾ ಅನ್ನುವಷ್ಟರಲ್ಲಿ ಊರೊಳಗೆ ತಿಳಿಯಿತು. ಇದನ್ನು ಕೇಳಿ ಜನರು ಅವನ ಬಳಿಗೆ ಬಂದು–"ನೀನು ಬ್ರಾಹ್ಮಣನಿದ್ದು ಗೋಹತ್ಯ ಮಾಡಿದೆ. ಆದುದರಿಂದ ನೀನು ಈ ಪಾಪದ ಸಲುವಾಗಿ ಪ್ರಾಯಶ್ಚಿತ್ತ ತೆಗೆದುಕೊಳ್ಳಬೇಕು" ಎಂದು ಹೇಳಿದರು. ಅದಕ್ಕೆ ಅವನು–"ನಾನು ಅದನ್ನು ಮಾಡಲಿಲ್ಲ. ನನ್ನ ಕೈ ಮಾಡಿರುತ್ತದೆ. ಇಂದ್ರನು ಯಾವತ್ತು ಇಂದ್ರಿಯಗಳ ಅಧಿಪತಿಯು ಇರುತ್ತಾನೆ. ಆದುದರಿಂದ ಯಾರಾದರೂ ಗೋಹತ್ಯ ಮಾಡಿದರೆ ಆ ಅಪರಾಧದ ಹೊಣೆಯು ಇಂದ್ರನದೇ ಇರುತ್ತದೆ. ನನ್ನದೇನೂ

ಅಲ್ಲ" ಎಂದು ಅವರಿಗೆ ಉತ್ತರ ಕೊಟ್ಟನು. ಇದನ್ನು ಸ್ವರ್ಗದಲ್ಲಿದ್ದ ಇಂದ್ರನು ಕೇಳಿ ಒಬ್ಬ ಮುದುಕ ಬ್ರಾಹ್ಮಣನ ವೇಷ ಹಾಕಿಕೊಂಡು ಆ ತೋಟದ ಒಡೆಯನ ಕಡೆಗೆ ಒಂದು ಕೆಳಗೆ ಬರೆದ ಪ್ರಕಾರ ಅವನೊಡನೆ ಸಂಭಾಷಣೆ ಮಾಡಿದನು:—

**ಇಂದ್ರ**—ಸ್ವಾಮಿಾ, ಈ ತೋಟವು ಯಾರದು?

**ಬ್ರಾಹ್ಮಣ**—ನನ್ನದು.

**ಇಂದ್ರ**—ಇದು ಎಂಥ ಸುಂದರವಾದ ತೋಟವಿರುತ್ತದೆ! ಇದು ಇಷ್ಟು ಚಂದವಾಗಿಯೂ ಚಮತ್ಕಾರವಾಗಿಯೂ ಇರುವದನ್ನು ನೋಡಿದರೆ ನಿಮ್ಮ ತೋಟ ಮಾಡುವವನು ಬಹಳ ಕುಶಲನಿರುತ್ತಾನೆಂದು ಕಾಣುತ್ತದೆ.

**ಬ್ರಾಹ್ಮಣ**—(ಆನಂದದಿಂದ) ಸ್ವಾಮಿಾ, ನಾನೇ ಇದನ್ನು ಮಾಡಿರುತ್ತೇನೆ. ನಾನೇ ನನ್ನ ಮೇಲ್ವಿಚಾರಣೆಯಲ್ಲಿ ನನ್ನ ಆಳುಗಳ ಕೈಯಿಂದ ಈ ಪ್ರಕಾರ ಗಿಡಗಳನ್ನು ಚಂದದಿಂದ ಹಚ್ಚಿಸಿರುತ್ತೇನೆ.

**ಇಂದ್ರ**—ಹೀಗೋ? ನೀವು ಬಹಳ ಚತುರರಿರುವಿರಿ. ಈ ತೋಟಕ್ಕೆ ಹೋಗುವ ದಾರಿಯನ್ನು ಮಾಡಿಸಿದವರಾರು? ಈ ದಾರಿಯನ್ನು ಮಾಡಿಸುವಲ್ಲಿ ಸಹ ಬಹಳ ಕಲ್ಪನಾಚಾತುರ್ಯವೂ ಪರಿಶ್ರಮವೂ ಉಪಯೋಗವಾಗಿರುತ್ತವೆ.

**ಬ್ರಾಹ್ಮಣ**—(ಹೆಚ್ಚಿಗೆ ಆನಂದದಿಂದ) ಇದನ್ನೆಲ್ಲ ನಾನೇ ಮಾಡಿರುತ್ತೇನೆ.

**ಇಂದ್ರ**—ಈ ಎಲ್ಲ ಕೆಲಸಗಳು ನಿಮ್ಮವೇ ಇದ್ದು ಇವಕ್ಕೆಲ್ಲ ನೀವೇ ಸ್ತುತಿಗೆ ಪಾತ್ರರಿರುವಾಗ ಈ ತೋಟದೊಳಗೆ ಆಕಳವನ್ನು ಕೊಂದದ್ದರ ಹೊಣೆಯನ್ನು ಆ ಬಡ ಇಂದ್ರನ ಮೇಲೆ ಯಾಕೆ ಹಾಕುತ್ತೀರಿ?

ಇದರಿಂದ ಆ ಬ್ರಾಹ್ಮಣನಿಗೆ ತಲೆಹೊಡೆದಂತಾಗಿ ಅವನು ಉತ್ತರ ಕೊಡದೆ ಸುಮ್ಮನಾದನು

## ತಾತ್ಪರ್ಯ.

ಮನುಷ್ಯನು ತನ್ನ ಒಳ್ಳೇ ಕೆಲಸದ ಯಶಸ್ಸನ್ನು ತೆಗೆದುಕೊಳ್ಳಲಿಕ್ಕೆ ಆತುರನಿರುತ್ತಿದ್ದು ಕೆಟ್ಟ ಕೆಲಸದ ಹೊಣೆಯನ್ನು ಮಾತ್ರ ತಪ್ಪಿಸಿಕೊಳ್ಳುತ್ತಾನೆ.

"ಮಾಡುವವನೂ ಮಾಡಿಸುವವನೂ ಪರಮೇಶ್ವರನು" ಎಂಬದನ್ನು ಮರೆಯು ವದರಿಂದ ಈ ಪ್ರಕಾರದ ಪ್ರಮಾದವುಂಟಾಗುತ್ತದೆ.

---

## ೯. ಅರ್ಜುನನ ಗರ್ವಹರಣವು.

ಒಂದು ಸಾರೆ ಅರ್ಜುನನಿಗೆ ತನ್ನಂತೆ ಶ್ರೀಕೃಷ್ಣನಲ್ಲಿ ಪ್ರೇಮ-ಭಕ್ತಿ-ವಿಶ್ವಾಸವುಳ್ಳವರು ಮತ್ತು ಅವನ ಸ್ನೇಹವುಳ್ಳವರು ಯಾರೂ ಇಲ್ಲೆಂಬ ಗರ್ವವು ಬಂದಿತ್ತು. ಆಗ ಆ ಸರ್ವಜ್ಞಾನಿಯಾದ ಪ್ರಭುವು ತನ್ನ ಸ್ನೇಹಿತನ ಗರ್ವವನ್ನು ತಿಳಿದುಕೊಂಡು ಒಂದು ದಿವಸ ಅವನನ್ನು ತನ್ನೊಡನೆ ಅಡ್ಡಾಡಲಿಕ್ಕೆ ಊರಹೊರಗೆ ಕರೆದುಕೊಂಡು ಹೋದನು. ಅವರಿಬ್ಬರೂ ಇನ್ನೂ ದೂರ ಹೋಗಿದ್ದಿಲ್ಲ. ಇಷ್ಟರಲ್ಲಿ ಒಬ್ಬ ಬ್ರಾಹ್ಮಣನು ಒಂದು ಕತ್ತಿಯನ್ನು ತನ್ನ ನಡದಲ್ಲಿ ಝಳಪಿಸುತ್ತ ಒಣ ಹುಲ್ಲನ್ನು ತಿನ್ನುತ್ತಿರುವದನ್ನು ಅರ್ಜುನನು ಕಂಡನು. ಆಗ ಅರ್ಜುನನು ತನ್ನ ಮನಸ್ಸಿನೊಳಗೆ—"ಇವನು ಅಹಿಂಸೆಯು ತನ್ನ ಶ್ರೇಷ್ಠವಾದ ಕರ್ತವ್ಯವೆಂಬ ವಿಶ್ವಾಸವುಳ್ಳಂಥ ಶ್ರೀವಿಷ್ಣುಭಕ್ತನೆಂದು ಕಾಣುತ್ತದೆ. ಆದುದರಿಂದಲೇ ಇವನು ಹುಲ್ಲುಗಳಲ್ಲಿ ಸಹ ಜೀವವಿರುತ್ತದೆಂದು ಹಸರು ಹುಲ್ಲನ್ನು ತಿನ್ನುವ ಬದಲಾಗಿ ಒಣಗಿದ ಹುಲ್ಲನ್ನು ತಿನ್ನುತ್ತಿದ್ದಾನೆ. ಹೀಗಿದ್ದು ಇಂಥ ಪಾಪಭೀರು ಬ್ರಾಹ್ಮಣನ ಹತ್ತರ ಈ ಕತ್ತಿಯು ಯಾಕೆ ಇರಬಹುದು?" ಎಂದು ಸ್ವಲ್ಪ ಹೊತ್ತು ಬಹಳ ದಿಗಿಲುಬಡಿದು ನಿಂತನು. ಕಡೆಗೆ ಅವನು ಶ್ರೀಕೃಷ್ಣನಿಗೆ—"ಪ್ರಭೋ, ಇದೇನು? ಇದೆಲ್ಲವು ವಿಸಂಗತವಾಗಿ ಕಾಣುತ್ತದೆ. ಒಂದು ತೃಣದಂಥ ಸಣ್ಣ ಪ್ರಾಣಿಯನ್ನು ಸಹ ಹಿಂಸೆ ಮಾಡಬಾರದೆಂದು ನಡೆಯುತ್ತಿರುವ ಈ ಧರ್ಮನಿಷ್ಠ ಬ್ರಾಹ್ಮಣನಲ್ಲಿ ದ್ವೇಷ ಮತ್ತು ಮೃತ್ಯುಗಳ ಚಿಹ್ನವೆಂದೆನಿಸುವ ಕತ್ತಿಯು ಯಾಕೆ ಇರುವದು?" ಎಂದು ಕೇಳಿದನು. ಅದಕ್ಕೆ ಶ್ರೀಕೃಷ್ಣನು—"ಅರ್ಜುನಾ, ಇದನ್ನು ಅವನಿಗೆ ನೀನೇ ಕೇಳಿಕೋ" ಎಂದು ಹೇಳಿದನು.

ತರುವಾಯ ಅರ್ಜುನನು ಆ ಬ್ರಾಹ್ಮಣನ ಕಡೆಗೆ ಹೋಗಿ—"ಸ್ವಾಮಿಾ, ನೀವು ಯಾವ ಜೀವಾತ್ಮಕ್ಕೂ ಹಿಂಸೆ ಮಾಡುವದಿಲ್ಲವಾದ್ದರಿಂದ ಒಣ ಹುಲ್ಲು

ಭಕ್ಷಣ ಮಾಡುತ್ತೀರಿ. ಹೀಗಿದ್ದು ನೀವು ನಿಮ್ಮ ಹತ್ತರ ಈ ಕತ್ತಿಯನ್ನು ಯಾಕೆ ಇಟ್ಟಿರುವಿರಿ?" ಎಂದು ಕೇಳಿದನು. ಅದಕ್ಕೆ ಆ ಬ್ರಾಹ್ಮಣನು ಅರ್ಜುನನ ಮೋರೆಯ ಕಡೆಗೆ ನೋಡಿ–"ನಾನು ನಾಲ್ಕು ವ್ಯಕ್ತಿಗಳ ಶಾಸನ ಮಾಡಲಿಕ್ಕೆ ಈ ಕತ್ತಿಯನ್ನು ಯಾವಾಗಲು ನನ್ನ ಹತ್ತರ ಇಟ್ಟುಕೊಂಡಿರುತ್ತೇನೆ" ಎಂದು ಹೇಳಿದನು. ಆಗ ಅರ್ಜುನನು ಅವರು ಯಾರು ಯಾರು?" ಎಂದು ಕೇಳಿದನು. ಅದಕ್ಕೆ ಆ ಬ್ರಾಹ್ಮಣನು-"ಮೊದಲನೆಯವನು ಆ ನೀಚ ನಾರದನು" ಅಂದನು. ಅದಕ್ಕೆ ಅರ್ಜುನನು-"ಯಾಕೆ? ಅವನೇನು ಮಾಡಿರುತ್ತಾನೆ?" ಎಂದು ಕೇಳಿದನು. ಆಗ ಬ್ರಾಹ್ಮಣನು–"ಅವನು ಬಹಳ ಅಧಿಕ ಪ್ರಸಂಗಿಯು ಇರುತ್ತಾನೆ. ಅವನು ಯಾವಾಗಲು ಭಜನೆ ಮಾಡುತ್ತ ಭಗವಂತನನ್ನು ಎಚ್ಚರ ಮಾಡುತ್ತಾನೆ. ಭಗವಂತನ ಸೌಖ್ಯದ ಕಡೆಗೆ ಅವನಿಗೆ ಎಳ್ಳಷ್ಟಾದರೂ ಚಿಂತೆಯು ಇಲ್ಲ! ಅವನು ಯೋಗ್ಯಾಯೋಗ್ಯ ವೇಳೆಯನ್ನು ನೋಡದೆ ಹಗಲಿರುಳು ತನ್ನ ಸ್ತುತಿಸ್ತೋತ್ರಗಳಿಂದ ಭಗವಂತನ ಶಾಂತತೆಯನ್ನು ಭಂಗಪಡಿಸುತ್ತಾನೆ" ಅಂದನು. "ಹಾಗಾದರೆ ಎರಡನೆಯವನು ಯಾರು?" ಎಂದು ಅರ್ಜುನನು ಕೇಳಿದನು. ಅದಕ್ಕೆ ಆ ಬ್ರಾಹ್ಮಣನು–"ಅವಿವೇಕಿಯಾದ ದ್ರೌಪದಿಯು" ಅಂದನು. "ಆಕೆಯ ಅಪರಾಧವೇನು?" ಎಂದು ಅರ್ಜುನನು ಕೇಳಿದನು. ಆಗ ಆ ಬ್ರಾಹ್ಮಣನು-"ಆಕೆಯ ಅಪರಾಧವೆಷ್ಟೆಂದು ಹೇಳಲಿ! ಪಾಂಡವರನ್ನು ದುರ್ವಾಸ ಋಷಿಯ ಶಾಪದಿಂದ ತಪ್ಪಿಸುವಗೋಸ್ಕರ ಭಗವಂತನಿಗೆ ಆತನು ಊಟಕ್ಕೆ ಕುಳಿತುಕೊಳ್ಳುವ ಸಮಯದಲ್ಲಿ ಆತನು ಊಟಮಾಡುದನ್ನು ಸಹ ಬಿಡಿಸಿ ಕಾಮ್ಯಕವನಕ್ಕೆ ಕರೆಯಿಸಿಕೊಂಡು ಸೊಕ್ಕಿನಿಂದ ತನ್ನ ಮುಸರಿಯ ಪಾತ್ರೆಗೆ ಅಂಟಿಕೊಂಡಿದ್ದ ಒಂದು ಪಲ್ಲೆಯ ಚೂರನ್ನು ಮಾತ್ರ ಆತನಿಗೆ ತಿನ್ನಲಿಕ್ಕೆ ಕೊಟ್ಟಳು" ಅಂದನು. "ಹಾಗಾದರೆ ಮೂರನೆಯವನು ಯಾರು?" ಎಂದು ಅರ್ಜುನನು ಕೇಳಿದನು. ಅದಕ್ಕೆ ಆ ಬ್ರಾಹ್ಮಣನು–"ಆ ನಿರ್ದಯಿಯಾದ ಪ್ರಹ್ಲಾದನು" ಅಂದನು. "ಅದು ಹೇಗೆ?" ಎಂದು ಅರ್ಜುನನು ಕೇಳಲು, ಬ್ರಾಹ್ಮಣನು–"ಅವನು ಭಗವಂತನಿಗೆ ಎಣ್ಣೆ ಕಾಸಿದ ಕಡಾಯಿಯಲ್ಲಿ ಬೀಳಲಿಕ್ಕೂ, ಆನೆಯ ಕಾಲಿನಿಂದ ತುಳಿಸಿಕೊಳ್ಳಲಿಕ್ಕೂ, ಉಕ್ಕಿನ ಬಿರುಸು ಕಂಬದಿಂದ ಹೊರಬೀಳಲಿಕ್ಕೂ ಹಚ್ಚಿದನು" ಎಂದು ಉತ್ತರ ಕೊಟ್ಟನು. "ಹಾ

ಗಾದರೆ ಇನ್ನು ನಾಲ್ಕನೆಯುವನು ಯಾರು?" ಎಂದು ಅರ್ಜುನನು ಕೇಳಿದನು. ಅದಕ್ಕೆ ಆ ಬ್ರಾಹ್ಮಣನು-"ದರಿದ್ರನಾದ ಅರ್ಜುನನು" ಎಂದು ಹೇಳಿದನು. ಆಗ ಅರ್ಜುನನು-"ಅವನು ಏನು ಅಪರಾಧ ಮಾಡಿರುತ್ತಾನೆ?" ಎಂದು ಆಶ್ಚರ್ಯದಿಂದ ಕೇಳಿದನು. ಅದಕ್ಕೆ ಆ ಬ್ರಾಹ್ಮಣನು-"ಅವನ ನಾಚಿಕೆಗೇಡಿತನವನ್ನು ನೋಡು! ಅವನು ಕುರುಕ್ಷೇತ್ರದ ಯುದ್ಧದಲ್ಲಿ ನನ್ನ ಪ್ರಿಯಕರನಾದ ಭಗವಂತನಿಗೆ ತನ್ನ ಸಾರಥಿಯ ಕೆಲಸವನ್ನು ಮಾಡಲಿಕ್ಕೆ ಹಚ್ಚಿದನು" ಅಂದನು. ಇದನ್ನು ಕೇಳಿ ಅರ್ಜುನನಿಗೆ ಆ ಬ್ರಾಹ್ಮಣನ ಭಕ್ತಿಯ ಬಗ್ಗೆ ಬಹಳ ಆಶ್ಚರ್ಯವೆನಿಸಿತು. ಆಗಿನಿಂದ ಅವನು ತಾನು ಭಗವಂತನಿಗೆ ಹೆಚ್ಚು ಪ್ರಿಯಕರನೆಂಬ ಗರ್ವವನ್ನು ಬಿಟ್ಟುಕೊಟ್ಟನು.

### ತಾತ್ಪರ್ಯ.

ಯಾರೂ ಯಾವ ವಿಷಯದಲ್ಲಿಯೂ ಗರ್ವವನ್ನು ಮಾಡಬಾರದು. ಒಳ್ಳೇ ಕೆಲಸದಲ್ಲಿ ಗರ್ವವನ್ನು ಮಾಡಿದರೆ ಆ ಗರ್ವಕ್ಕೆ ಅಭಿಮಾನವೆನ್ನುತ್ತಾರೆ. ಆದರೂ ಅದು ಸಹ ನಿಂದ್ಯವಿರುತ್ತದೆ. ಅಹಂಕಾರವನ್ನು ಬಿಟ್ಟು ಕಿಂಕರನಾಗಿ ನಡೆಯುವವನು ಯಾವಾಗಲು ಶ್ರೇಯಸ್ಸನ್ನೂ ಪರಮೇಶ್ವರನ ಅನುಗ್ರಹವನ್ನೂ ಪಡೆಯುವನು.

---

## ೧೦. ಶ್ರೀ ರಾಮಚಂದ್ರನ ವೈರಾಗ್ಯವು.

ದಾಶರಥೀ ರಾಮಚಂದ್ರನು ತನ್ನ ಗುರುಗಳ ಬಳಿಯಲ್ಲಿ ವಿದ್ಯಾಭ್ಯಾಸವನ್ನು ಮುಗಿಸಿ ಜ್ಞಾನಸಂಪನ್ನನಾದ ತರುವಾಯ ಸಂಸಾರತ್ಯಾಗವನ್ನು ಮಾಡಬೇಕೆಂದು ನಿಶ್ಚಯಮಾಡಿದನು. ಆಗ ಅವನ ತಂದೆಯಾದ ದಶರಥರಾಜನು ತನ್ನ ಕುಲಗುರುಗಳಾದ ವಸಿಷ್ಠ ಋಷಿಗಳನ್ನು ಕರೆಯಿಸಿ ಅವರಿಗೆ—"ತಾವು ರಾಮಚಂದ್ರನಿಗೆ ನಾಲ್ಕು ಉಪದೇಶದ ಮಾತುಗಳನ್ನು ಹೇಳಿ ಅವನ ವೈರಾಗ್ಯವೃತ್ತಿಯನ್ನು ಬಿಡಿಸಬೇಕು" ಎಂದು ವಿನಂತಿ ಮಾಡಿಕೊಂಡನು. ಆ ಪ್ರಕಾರ ವಸಿಷ್ಠ ಗುರುಗಳು ರಾಮಚಂದ್ರನ ಬಳಿಗೆ ಹೋಗಿ ರಾಮಚಂದ್ರನಲ್ಲಿ ತೀವ್ರವಾದ ವೈರಾಗ್ಯವು ಹುಟ್ಟಿದ್ದನ್ನು ಅವಲೋಕಿಸಿದರು. ಆ ಮೇಲೆ ಅವರು ಆ

ವನಿಗೆ-“ ರಾಮಭದ್ರಾ, ನೀನು ಮನೆಯನ್ನು ಬಿಟ್ಟು ಹೋಗಬೇಕೆಂದು ನಿಶ್ಚಯಿಸಿರುವದಾಗಿ ಕೇಳುತ್ತೇನೆ. ಇದು ನಿಜವಿದ್ದಲ್ಲಿ ನಾನು ನಿನಗೆ ಒಂದು ಪ್ರಶ್ನೆಯನ್ನು ಕೇಳುತ್ತೇನೆ. ಅದಕ್ಕೆ ನೀನು ಮುಂಚೆ ಉತ್ತರಕೊಟ್ಟು ನನ್ನನ್ನು ಸಮಾಧಾನ ಮಾಡು. ಅದೇನಂದರೆ:—ಸಂಸಾರವು ಈಶ್ವರನನ್ನು ಬಿಟ್ಟು ಬೇರೆ ಇರುತ್ತದೆಯೋ ಹೇಗೆ? ಒಂದು ವೇಳೆ ಸಂಸಾರವು ಈಶ್ವರನನ್ನು ಬಿಟ್ಟಿರುತ್ತಿದ್ದರೆ ನೀನು ವೈರಾಗ್ಯವನ್ನು ಸ್ವೀಕರಿಸಿ ನಿನ್ನ ಮನಸ್ಸಿಗೆ ಬಂದಲ್ಲಿ ಹೋಗಲಿಕ್ಕೆ ಅಡ್ಡಿಯಿಲ್ಲ” ಎಂದು ಹೇಳಿದರು. ಈ ಪ್ರಕಾರ ವಸಿಷ್ಠರು ಹೇಳಿದ್ದನ್ನು ಶ್ರೀರಾಮಚಂದ್ರನು ಚನ್ನಾಗಿ ವಿಚಾರ ಮಾಡಿ, ದೇವರು ಸಂಸಾರದಲ್ಲಿ ವ್ಯಕ್ತನು, ಆತ್ಮದಲ್ಲಿ ಅವ್ಯಕ್ತನು ಇರುತ್ತಾನೆಂತಲೂ, ಅವನಲ್ಲಿಯೇ ಯಾವತ್ತು ಸ್ಥಾವರ ಜಂಗಮ ಸೃಷ್ಟಿಯು ಮತ್ತು ಎಂಬತ್ತು ಲಕ್ಷ ಪ್ರಾಣಿಕೋಟಿಯು ಐಕ್ಯವಾಗಿರುತ್ತವೆಂತಲೂ ತಿಳಿದುಕೊಂಡು ವೈರಾಗ್ಯವನ್ನು ಸ್ವೀಕರಿಸುವ ವಿಚಾರವನ್ನು ಬಿಟ್ಟುಕೊಟ್ಟನು.

### ತಾತ್ಪರ್ಯ.

ಈಶ್ವರನು ಯಾವತ್ತು ಕಡೆಗೆ ವ್ಯಾಪಿಸಿರುತ್ತಾನೆ. ಆತನು ಯಾವತ್ತು ಪ್ರಾಣಿಮಾತ್ರರಲ್ಲಿ ಇರುತ್ತಾನೆ ಆದುದರಿಂದ ಅವನ ಪ್ರಾಪ್ತಿಯ ಸಲುವಾಗಿ ಸಂಸಾರವನ್ನು ಬಿಡಬೇಕೆಂದು ಯಾರೂ ತಿಳಿದುಕೊಳ್ಳಬಾರದು. ನಾವು ಅರಣ್ಯಕ್ಕೆ ಹೋಗಲಿ, ಸಂಸಾರದಲ್ಲಿಯೇ ಇರಲಿ, ಈಶ್ವರನ ಬಗ್ಗೆ ಭಕ್ತಿಯನ್ನು ಇಟ್ಟರೆ ಅವನ ಪ್ರಾಪ್ತಿಯು ನಮಗೆ ಆಗುವದೆಂಬದರಲ್ಲಿ ಏನೂ ಸಂಶಯವಿಲ್ಲ.

---

## ೧೧. ಜನಕರಾಜನ ಜೀವನ್ಮುಕ್ತಿಯು.

ಒಂದು ಸಾರೆ ಕೆಲವು ಬ್ರಹ್ಮೋಸಮಾಜದ ಹುಡುಗರು ಭಗವಾನ್ ರಾಮಕೃಷ್ಣ ಪರಮಹಂಸರ ಮುಂದೆ ತಾವು ಜನಕರಾಜನ ಉದಾಹರಣೆಯನ್ನು ಅನುಕರಣ ಮಾಡಿ ಈ ಜಗತ್ತಿನಲ್ಲಿ ಯಾವದಕ್ಕೂ ಆಸಕ್ತಿಯನ್ನು ತಾಳದೆ ಇರುತ್ತೇವೆಂದು ಹೇಳಿದರು. ಆಗ ಭಗವಾನರು ಅವರಿಗೆ-“ ಬಾಯಿಂದ ಹೇಳು

ವದು ಸುಲಭವು. ಆದರೆ ಜನಕರಾಜನಂತೆ ನಡೆಯುವದು ಬಹಳ ಕಠಿಣವಿರು ತ್ತದೆ. ಸಂಸಾರದಲ್ಲಿ ಶುದ್ಧ ಮನಸ್ಸಿನಿಂದಲೂ ನಿಷ್ಪಾಪದಿಂದಲೂ ಇರಬೇಕಾ ದರೆ ಜನಕರಾಜನು ಮೊದಲಿಗೆ ಎಂಥ ಉಗ್ರವಾದ ತಪಶ್ಚರ್ಯವನ್ನು ಮಾಡಿ ದನು? ಆದರೆ ನಿಮಗೆ ಇಂಥ ಕಷ್ಟಗಳನ್ನು ಅನುಭೋಗಿಸಲಿಕ್ಕೆ ನಾನು ಹೇಳು ವದಿಲ್ಲ. ನೀವು ಈಶ್ವರಭಕ್ತಿಯನ್ನು ಮಾಡುತ್ತ ಯಾವದಾದರೂ ಶಾಂತವಾದ ಸ್ಥಳದಲ್ಲಿ ಕೆಲವು ಕಾಲ ಇರಬೇಕು. ನಿಮಗೆ ಜ್ಞಾನ ಮತ್ತು ಭಕ್ತಿಗಳು ಲಭ್ಯ ವಾದ ಮೇಲೆ ಸಂಸಾರವನ್ನು ಸೇರಿರಿ. ಹಾಲನ್ನು ತಣ್ಣಗೆ ಇಟ್ಟಬಳಿಕ ಅದ ರಿಂದ ಉತ್ತಮವಾದ ಮೊಸರು ಸಿದ್ಧವಾಗುತ್ತದೆ. ಹಾಲನ್ನು ಅಲ್ಲಾಡಿಸಿದರೆ ಅಥವಾ ಅದನ್ನು ಒಂದು ಪಾತ್ರೆಯಿಂದ ಇನ್ನೊಂದು ಪಾತ್ರೆಗೆ ಸುರುವಿದರೆ ಮೊಸರು ಕೆಡುತ್ತದೆ. ಜನಕರಾಜನು ಸಂಸಾರಬಂಧನದಿಂದ ಮುಕ್ತನಿದ್ದ ಕಾ ರಣ ಆವನಿಗೆ "ವಿದೇಹಿ" ಅಂದರೆ "ದೇಹವಿಲ್ಲದವನು" ಎಂದು ಅನ್ನುತ್ತಾ ರೆ. ಅವನ ದೇಹವು ಜೀವಂತವಿದ್ದರೂ ಅವನು ಅದರ ತಾಪಗಳಿಂದ ಮುಕ್ತ ನಿದ್ದ ಕಾರಣ ಅವನಿಗೆ ಜೀವನ್ಮುಕ್ತನೆಂಬ ಹೆಸರು ಒಂದಿರುತ್ತದೆ. ದೇಹ ವು ಇರುತ್ತದೆಂಬ ಭಾವನೆಯನ್ನು ಮನಸ್ಸಿನೊಳಗಿಂದ ತೆಗೆದುಹಾಕುವದು ಅ ತ್ಯಂತ ಕಠಿಣವಿರುತ್ತದೆ. ನಿಶ್ಚಯವಾಗಿ ಜನಕರಾಜನು ದೊಡ್ಡ ವೀರನಿದ್ದನು. ಅವನು ಜ್ಞಾನ ಮತ್ತು ಕರ್ಮ ಎಂಬ ಎರಡು ಶಸ್ತ್ರಗಳನ್ನು ಬಹಳ ಸುಲಭವಾಗಿ ಝಳುಪಿಸುತ್ತಿದ್ದನು.

## ತಾತ್ಪರ್ಯ.

ಅಜ್ಞಾನ ಜನರು ಯೋಗ್ಯತೆಯಿಲ್ಲದೆ ದೊಡ್ಡವರ ಸಾಮ್ಯತೆಯನ್ನು ಹೇಳಿಕೊಂಡರೆ ಅವರ ಮೂಢತನವನ್ನು ಕಂಡು ವಿವೇಕಿಗಳು ನಗುತ್ತಾರೆ. ಆದುದರಿಂದ ಸಣ್ಣವರು ಸಣ್ಣವರ ಸಾಮ್ಯತೆಯನ್ನು ಕೊಟ್ಟುಕೊಳ್ಳಬೇಕಲ್ಲದೆ ದೊಡ್ಡವರ ಸಾಮ್ಯತೆಯನ್ನು ಹೇಳಿಕೊಂಡು ಆತ್ಮಪೌರುಷ ಮಾಡಿಕೊಳ್ಳು ವದು ಸರಿಯುಲ್ಲ. ಕಪ್ಪೆಯು ಎಷ್ಟು ದೊಡ್ಡದಾದರೂ ಆನೆಯಾಗಲಾರದು. ಕಪ್ಪೆಯು ತಾನು ಆನೆಯಾಗಬೇಕೆಂದು ಹೊಟ್ಟೆಯನ್ನು ಉಬ್ಬಿಸಿದರೆ ಅದರ ಹೊ ಟ್ಟೆಯು ಹರಿದು ಅದು ಜೀವಕ್ಕೆ ಮಾತ್ರ ಎರವಾಗುವದು. ದೊಡ್ಡವರ ಸಾಮ್ಯ ತೆಯನ್ನು ಕೊಟ್ಟುಕೊಂಡು ತಾವು ದೊಡ್ಡವರಂತೆ ನಡೆಯುತ್ತೇವೆಂದು ಹೇಳಿ

ಕೊಂಡ ಮಾತ್ರದಿಂದ ಅಂಥವರಿಗೆ ಯಾರೂ ದೊಡ್ಡಸ್ತಿಕೆಯನ್ನು ಕೊಡುವದಿಲ್ಲ. ಇದರಿಂದ ಅವರಲ್ಲಿ ಇದ್ದ ಯೋಗ್ಯತೆಯು ಸಹ ಕಡಿಮೆಯಾಗಿ ಜನರು ಅವರಿಗೆ "ಡಾಂಭಿಕರು, ಜೊಳ್ಳುಕೊಚ್ಚುವವರು" ಎಂದು ಅವರ ಮಾತಿನ ಕಡೆಗೆ ಎಂದೂ ಲಕ್ಷ್ಯಕೊಡುವದಿಲ್ಲ.

---

## ೧೨. ಈಗಿನ ವಿದ್ಯಾವಂತನ ಪ್ರಪಂಚದ ರೀತಿಯು.

ಈಗಿನ ವಿದ್ಯಾವಂತನು ತಾನು ಗೃಹಸ್ಥಾಶ್ರಮಿ ಇದ್ದರೂ ಪ್ರಪಂಚದ ತೊಂದರೆಯನ್ನು ಹಚ್ಚಿಕೊಳ್ಳದೆ ಪವಿತ್ರನಿರುತ್ತೇನೆಂದು ಅನೇಕಸಾರೆ ಅಗ್ಗಳಿಕೆಯ ಮಾತನ್ನು ನುಡಿಯುತ್ತಾನೆ. ಆದರೆ ಈ ಸುಶಿಕ್ಷಿತ ಗೃಹಸ್ಥಾಶ್ರಮಿಯು ಹೇಗೆ ನಡೆಯುತ್ತಾನೆಂಬುವದನ್ನು ನೋಡಿದರೆ ಯಾರಿಗೂ ಆಶ್ಚರ್ಯವಾಗದೆ ಇರಲಾರದು. ಅವನ ಮನೆಗೆ ಯಾವನಾದರೊಬ್ಬ ಬಡ ಬ್ರಾಹ್ಮಣನು ಯಾಚನೆಯ ಸಲುವಾಗಿ ಬಂದ ಕೂಡಲೆ ಅವನು ತನ್ನ ಯಾವತ್ತು ದುಡ್ಡಿನ ವ್ಯವಹಾರವನ್ನು ತನ್ನ ಹೆಂಡತಿಯ ಕಡೆಗೆ ಒಪ್ಪಿಸಿರುವ ಕಾರಣ ಬಹಳ ಆರ್ದ್ರತೆಯಿಂದ ಅವನಿಗೆ--"ಸ್ವಾಮಿಾ, ನಾನು ಎಂದಿಗೂ ಹಣವನ್ನು ಕೈಯಿಂದ ಸಹ ಮುಟ್ಟುವದಿಲ್ಲ. ನೀವು ಸುಮ್ಮನೆ ನನ್ನ ಬಳಿಯಲ್ಲಿ ಯಾಕೆ ವೇಳೆಯನ್ನು ಕಳೆಯುತ್ತೀರಿ?" ಎಂದು ಅನ್ನುತ್ತಾನೆ. ಆದರೆ ಆ ಭಿಕ್ಷುಕನು ಅದನ್ನು ಕೇಳದೆ ಹಟಹಿಡಿದು ಕುಳಿತ ತರುವಾಯ ಈ ಸದ್ಗೃಹಸ್ಥನು--"ಏನು ಹೇಳಿದರೂ ಈ ಹಟಮಾರಿಯು ನನ್ನನ್ನು ಬಿಟ್ಟುಹೋಗುವದಿಲ್ಲ. ಇವನಿಗೆ ಹೇಗೂ ಒಂದು ರೂಪಾಯಿ ಒಗೆಯಬೇಕು" ಎಂದು ತನ್ನ ಮನಸ್ಸಿನೊಳಗೆ ವಿಚಾರ ಮಾಡಿ ಅವನಿಗೆ--"ಒಳ್ಳೇದು. ಈಗ ಹೋಗಿ ನಾಳೆ ಬನ್ನಿರಿ. ನಿಮ್ಮ ಸಲುವಾಗಿ ಏನಾದರೂ ವ್ಯವಸ್ಥೆಯನ್ನು ಮಾಡಿಸುತ್ತೇನೆ" ಎಂದು ಅವನನ್ನು ಕಳುಹಿಸುವನು ಮಾರನೇ ದಿವಸ ಆ ಯಾಚಕನು ತಿರುಗಿ ಬಂದ ಕೂಡಲೆ ವಿದ್ಯಾವಂತ ಗೃಹಸ್ಥಾಶ್ರಮಿಯು ಒಳಗೆ ತನ್ನ ಹೆಂಡತಿಯ ಕಡೆಗೆ ಹೋಗಿ--"ಪ್ರಿಯಳೇ, ನನ್ನ

ಕಡೆಗೆ ಒಬ್ಬ ಬಡ ಯಾಚಕನು ಬಂದಿರುತ್ತಾನೆ. ಅವನಿಗೆ ಒಂದು ರೂಪಾಯಿ ಕೊಟ್ಟು ಬಿಡು" ಎಂದು ಹೇಳುವನು. 'ರೂಪಾಯಿ' ಎಂಬ ಶಬ್ದವು ಅವನ ಹೆಂಡತಿಯ ಕಿವಿಗೆ ಬಿದ್ದ ಕೂಡಲೆ ಅವಳು ಬಹಳ ಸಿಟ್ಟಿಗೆದ್ದು–"ಅಹಹಾ, ನೀವು ಎಂಥ ಉದಾರರು! ರೂಪಾಯಿಗಳು ದಾರಿಯ ಮೇಲೆ ಬಿದ್ದಿರುತ್ತವೋ? ಅವುಗಳನ್ನು ದೊರಕಿಸಲಿಕ್ಕೆ ಕಣ್ಣೀರು ಕಪಾಳಕ್ಕೆ ಬರುತ್ತವೆ!" ಎಂದು ಉತ್ತರ ಕೊಡುವಳು. ಆಗ ಅವನು ಆಕೆಗೆ ಸ್ವಲ್ಪ ವಿನಯದಿಂದ–"ಪ್ರಿಯೇ, ಹಾಗಲ್ಲ. ನನ್ನ ಕಡೆಗೆ ಬಂದಿರುವ ಯಾಚಕನು ಸತ್ಪಾತ್ರನಿರುತ್ತಾನೆ. ಅವನಿಗೆ ಒಂದು ರೂಪಾಯಿಗಿಂತ ಕಡಿಮೆ ಕೊಡುವದು ಯೋಗ್ಯವಲ್ಲ" ಎಂದು ಹೇಳುವನು. ಅದಕ್ಕೆ ಅವಳು–"ಛೇ! ಇಷ್ಟೊಂದು ಕೊಡಲಿಕ್ಕೆ ಆಗುವದಿಲ್ಲ. ಇಲ್ಲಿ ಒಂದು ಎರಡಾಣೆಯ ನಾಣ್ಯವು ಇರುತ್ತದೆ. ಬೇಕಾದರೆ ಅದನ್ನು ತೆಗೆದುಕೊಂಡು ಹೋಗಿ ಅವನಿಗೆ ಕೊಡಿರಿ" ಎಂದು ಹೇಳುವಳು. ಆ ಪ್ರಕಾರ ಅವನು ಎರಡನೇ ದಿವಸ ತನ್ನ ಕಡೆಗೆ ಯಾಚಕನು ಬಂದ ಕೂಡಲೆ ಅವನ ಕೈಯಲ್ಲಿ ಈ ಎರಡು ಆಣೆಯನ್ನು ಒಯ್ದು ಕೊಡುವನು. ಈ ಪ್ರಕಾರ ಆಧುನಿಕ ಸುಶಿಕ್ಷಿತನು ತನ್ನ ಮನೆಯ ವ್ಯವಸ್ಥೆಯನ್ನು ತಾನು ನೋಡದೆ ತನ್ನ ಹೆಂಡತಿಯ ಕೈಯಲ್ಲಿ ಎಲ್ಲ ಕಾರಭಾರವನ್ನು ಒಪ್ಪಿಸಿ ಅವಳ ತಂತ್ರದಿಂದ ನಡೆಯುತ್ತಾನೆ. ಇದು ಒಂದು ತರದ ಪರವಶತೆಯೇ ಇರುತ್ತದೆ.

## ತಾತ್ಪರ್ಯ.

ತಮ್ಮ ಪ್ರಪಂಚದ ಕೆಲಸಗಳನ್ನು ತಾವೇ ಮಾಡದಿರುವ ಮನುಷ್ಯರು ನಿಜವಾಗಿ ಎರಡನೆಯವರ ಆಳುಗಳಾಗಿ ನಡೆಯಬೇಕಾಗುತ್ತದೆ. ತಮ್ಮ ಸ್ವತಂತ್ರತೆಯನ್ನೂ, ಅಧಿಕಾರವನ್ನೂ ಎರಡನೇಯವರಿಗೆ ಒಪ್ಪಿಸಿ ಬಿಡುವದರಿಂದ ತಾವು ಒಳ್ಳೆಯವರೆಂತಲೂ ಪವಿತ್ರರೆಂತಲೂ ತಿಳಿದುಕೊಳ್ಳುವದು ತೀರ ತಪ್ಪು. ಸತ್ಕರ್ಮಗಳನ್ನು ಸಹ ಮಾಡಲಿಕ್ಕೆ ಸ್ವಾತಂತ್ರ್ಯವಿಲ್ಲದ ಗಂಡಸರು ಸರ್ವಸಾಧಾರಣ ಮನುಷ್ಯರಿಗಿಂತ ಹೀನರೇ ಸರಿ.

# ೧೩. ವೈರಾಗ್ಯ ಪ್ರಾಪ್ತಿಯು.

ಒಬ್ಬ ಬ್ರಾಹ್ಮಣನಿಗೆ ಒಬ್ಬ ಸನ್ಯಾಸಿಯ ಸಂದರ್ಶನವಾಗಲು ಅವರವರೊಳಗೆ ಬಹಳ ಹೊತ್ತಿನ ತನಕ ಧರ್ಮಸಂಬಂಧವಾಗಿ ಮಾತುಕಥೆಗಳು ನಡೆದವು. ಆಗ ಸನ್ಯಾಸಿಯು ಆ ಬ್ರಾಹ್ಮಣನಿಗೆ-" ಮಗನೇ, ಈ ಜಗತ್ತಿನಲ್ಲಿ ಯಾರನ್ನೂ ನಂಬಿ ನಡೆಯಬಾರದು. ನಿನ್ನವರು ಯಾರು ಇದ್ದಾರೆಂದು ನಂಬಿರುವಿಯೋ ಅವರು ನಿಜವಾಗಿ ನಿನ್ನವರಲ್ಲ" ಎಂದು ಹೇಳಿದನು. ಈ ಮಾತಿನಲ್ಲಿ ಆ ಬ್ರಾಹ್ಮಣನಿಗೆ ನಂಬಿಗೆಯು ಹುಟ್ಟಲಿಲ್ಲ. ಆದುದರಿಂದ ಅವನು-"ನಾನು ರಾತ್ರಿ ಹಗಲು ನನ್ನ ಕುಟುಂಬದವರ ಹಿತದ ಸಲುವಾಗಿ ದುಡಿಯುತ್ತಿರಲು ಅವರು ನನ್ನವರಲ್ಲವೆಂದೂ, ಅವರು ನನಗೆ ಆಪತ್ತಿನ ಸಮಯದಲ್ಲಿ ಉಪಯೋಗ ಬೀಳುವದಿಲ್ಲವೆಂದೂ ನಾನು ಹೇಗೆ ನಂಬಲಿ?" ಎಂದು ತನ್ನ ಮನಸ್ಸಿನೊಳಗೆ ವಿಚಾರಮಾಡಿ ಆ ಸಾಧುವಿಗೆ-" ಸ್ವಾಮಿ, ನನಗೆ ಕಿಂಚಿತ್ತು ತಲೆನೋವು ಎದ್ದರೆ ಸಾಕು. ನನ್ನ ತಾಯಿಯು ನನ್ನ ವಿಷಯದಲ್ಲಿ ಬಹಳ ಚಿಂತೆ ಮಾಡುತ್ತಾಳೆ. ಹಾಗೂ ನನಗೆ ಗುಣವಾಗುವ ಸಲುವಾಗಿ ತನ್ನ ಜೀವವನ್ನು ಸಹ ಕೊಡಲಿಕ್ಕೆ ಸಿದ್ಧಳಿರುತ್ತಾಳೆ. ಇಂಥ ನನ್ನ ಪ್ರೀತಿಯ ತಾಯಿಯು ನನ್ನವಳಲ್ಲವೆಂದು ನಾನು ಹೇಗೆ ತಿಳಿದುಕೊಳ್ಳಲಿ?" ಎಂದು ಹೇಳಿದನು. ಇದನ್ನು ಕೇಳಿ ಆ ಸಾಧುವು ಅವನಿಗೆ-" ನೀನು ಹೇಳುವದು ನಿಜವಿರುವ ಪಕ್ಷದಲ್ಲಿ ನಿನ್ನ ಕುಟುಂಬದ ಎಲ್ಲ ಜನರನ್ನು ನಿನ್ನವರೆಂದು ತಿಳಿಯಲಿಕ್ಕೆ ಅಡ್ಡಿಯಿಲ್ಲ. ಆದರೆ ನಿಜವಾಗಿ ನಿನ್ನ ತಿಳುವಳಿಕೆಯು ತಪ್ಪು ಇರುತ್ತದೆ. ನಿನ್ನ ತಾಯಿ, ತಂದೆ, ಹೆಂಡತಿ, ಮಕ್ಕಳು ನಿನ್ನ ಗೋಸ್ಕರ ತಮ್ಮ ಜೀವವನ್ನು ಕೊಡುತ್ತಾರೆಂದು ಸರ್ವಥಾ ನಂಬಬೇಡ. ಬೇಕಾದರೆ ನಾನು ಹೇಳುವ ಮಾತನ್ನು ನೀನು ಚನ್ನಾಗಿ ಪರೀಕ್ಷೆ ಮಾಡು. ನೀನು ಇಂದು ಮನೆಗೆ ಹೋದಬಳಿಕ ನಿನಗೆ ಏನಾದರೊಂದು ಅತ್ಯಂತ ಕೆಟ್ಟ ಬೇನೆಯು ಬಂದಿರುತ್ತದೆಂದು ಎದ್ದು ತೆಗೆದು ಬಹಳ ನರಳುತ್ತ ಮಲಗಿಕೋ. ನಾನು ನಿನ್ನಲ್ಲಿಗೆ ಬಂದು ಸ್ವಲ್ಪ ಚಮತ್ಕಾರವನ್ನು ಮಾಡುತ್ತೇನೆ" ಎಂದು ಹೇಳಿದನು.

ಇದನ್ನು ಕೇಳಿಕೊಂಡು ಆ ಬ್ರಾಹ್ಮಣನು ತನ್ನ ಮನೆಗೆ ಹೋಗಿ ತನಗೆ ಒಂದು ದೊಡ್ಡ ಬೇನೆಯು ಬಂದಿದ್ದು ತನ್ನ ಜೀವಕ್ಕೆ ಬಹಳ ಕಸವಿಸಿಯಾಗು

ತ್ತದೆಂದು ಎದ್ದು ತೆಗೆದು ಹಾಸಿಗೆಯ ಮೇಲೆ ಮಲಗಿಬಿಟ್ಟನು. ಇದರಿಂದ ಅವನ ಮನೆಯವರು ಎಷ್ಟು ಮಂದಿ ವೈದ್ಯರನ್ನು ಕರೆಯಿಸಿದರೂ ಅವನಿಗೆ ಏನೂ ಗುಣವಾಗಲಿಲ್ಲ. ಆಗ ಅವನ ತಾಯಿ, ಹೆಂಡತಿ ಮೊದಲಾದವರು ಅವನ ಹತ್ತರ ಕೂತು ಗೋಳೋ ಎಂದು ಅಳಲಿಕ್ಕೆ ಹತ್ತಿದರು. ಅಷ್ಟರಲ್ಲಿ ಆ ಸನ್ಯಾಸಿಯು ಅಲ್ಲಿಗೆ ಬಂದು ಅವನ ಬೇನೆಯನ್ನು ಪರೀಕ್ಷಿಸಿದಂತೆ ಮಾಡಿ– “ಈ ಬೇನೆಯು ಬಹಳ ಭಯಂಕರವಿರುತ್ತದೆ. ಈ ರೋಗಿಯ ಸಲುವಾಗಿ ಯಾರಾದರೊಬ್ಬರು ತಮ್ಮ ಜೀವವನ್ನು ಕೊಟ್ಟ ಹೊರತಾಗಿ ಇವನು ನೆಟ್ಟಗಾಗುವ ಆಶೆಯು ಇಲ್ಲ” ಎಂದು ಹೇಳಿದನು. ಇದನ್ನು ಕೇಳಿ ಅವರೆಲ್ಲರು ಗಾಬರಿಯಾದರು. ಯಾರೂ ತಮ್ಮ ಜೀವ ಕೊಡುತ್ತೇವೆಂದು ಉತ್ತರ ಕೊಡಲಿಲ್ಲ. ಆಗ ಆ ಸನ್ಯಾಸಿಯು ಆ ಬ್ರಾಹ್ಮಣನ ತಾಯಿಗೆ—“ಅಮ್ಮಾ, ನಿನ್ನ ಯಾವತ್ತು ಕುಟುಂಬದ ಹೊಟ್ಟೆಗೆ ತಂದು ಹಾಕುವ ನಿನ್ನ ಹರೆಯದ ಮಗನು ಈ ನಿನ್ನ ಮುಪ್ಪಿನ ಕಾಲದಲ್ಲಿ ಸತ್ತರೆ ನಿನ್ನ ಜೀವವಿರುವಾಗಲೇ ನಿನಗೆ ಸಾವು ಬಂದಂತಾಗುವದು. ಆದುದರಿಂದ ಈಗ ನೀನು ನಿನ್ನ ಜೀವವನ್ನು ನಿನ್ನ ಮಗನ ಬದಲಾಗಿ ಕೊಟ್ಟರೆ ನಾನು ಅವನನ್ನು ಉಳಿಸುವೆನು. ನೀನು ಅವನ ಹಡೆದ ತಾಯಿಯಿದ್ದು ಅವನ ಸಲುವಾಗಿ ಜೀವ ಕೊಡದಿದ್ದರೆ ಇನ್ನಾರು ಕೊಟ್ಟಾರು?” ಎಂದು ಹೇಳಿದನು. ಆಗ ಆ ಮುದುಕಿಯು ಬಿಕ್ಕಿ ಬಿಕ್ಕಿ ಅಳುತ–“ಸಾಧು ಮಹಾರಾಯರೇ, ನನ್ನ ಮಗನ ಸಲುವಾಗಿ ನೀವು ಹೇಳಿದ್ದನ್ನು ಮಾಡಲಿಕ್ಕೆ ನಾನು ಸಿದ್ಧಳಿರುತ್ತೇನೆ. ಅವನ ಜೀವದ ಮುಂದೆ ನನ್ನ ಜೀವದ ಬೆಲೆಯು ಯಾತರದು? ಆದರೆ ನಾನು ಸತ್ತುಹೋದ ಮೇಲೆ ಈ ಚಿಕ್ಕ ಮಕ್ಕಳು ಮರಿಗಳ ಅವಸ್ಥೆಯು ಏನಾದೀತೆಂದು ನನ್ನ ಮನಸ್ಸಿನಲ್ಲಿ ಬಹಳ ಹೆದರಿಕೆಯು ಹುಟ್ಟಿರುತ್ತದೆ. ನಾನು ಎಷ್ಟು ದೈವಹೀನಳಾದರೂ ಈ ಚಿಕ್ಕ ಮಕ್ಕಳ ಸಲುವಾಗಿ ನಾಲ್ಕೊಪ್ಪತ್ತು ಬದುಕಿ ಇರಬೇಕಾಗಿರುತ್ತದೆ” ಎಂದು ಉತ್ತರಕೊಟ್ಟಳು. ಆ ಮೇಲೆ ಆ ಸನ್ಯಾಸಿಯು ಅವನ ತಂದೆಗೆ ಕೇಳಲು–“ಸ್ವಾಮಿ, ಯಾರೇನು ಮಾಡುವದದೆ? ಪ್ರತಿ ಒಬ್ಬನು ತನ್ನ ಕರ್ಮದ ಫಲವನ್ನು ಅನುಭೋಗಿಸುತ್ತಾನೆ. ಇದು ಜಗತ್ತಿನ ಧರ್ಮವಿರುತ್ತದೆ” ಎಂದು ನುಡಿದನು. ಆಗ ಆ ಸನ್ಯಾಸಿಯು ಆ ಬ್ರಾಹ್ಮಣನ ಹೆಂಡತಿಯ ಕಡೆಗೆ ತನ್ನ ಮೋರೆ ತಿರುವಿ–“ಎಲೈ

ಸಾಧ್ವಿಯೇ, ನಿನ್ನ ಗಂಡನ ಸಲುವಾಗಿ ಅವನ ತಾಯಿತಂದೆಗಳು ತಮ್ಮ ಜೀವ ವನ್ನು ಕೊಡುವದಿಲ್ಲೆನ್ನುತ್ತಾರೆ. ನೀನಾದರೂ ನಿನ್ನ ಜೀವವನ್ನು ಕೊಡುವಿಯಾ?" ಎಂದು ಕೇಳಿದನು. ಆಗ ಅವಳು ದೊಡ್ಡ ಧ್ವನಿಯಿಂದ ಅತ್ತು ತನ್ನ ತಾಯಿತಂದೆಗಳ ಕಡೆಗೆ ನೋಡಿ—"ಎಲೋ ತಾಯಿತಂದೆಗಳಿರಾ! ನಿಮ್ಮ ಮೋರೆಯನ್ನು ನೋಡಿ ನನಗೆ ನನ್ನ ಜೀವವನ್ನು ಕೊಡಬಾರದೆಂಬ ಬುದ್ಧಿ ಹುಟ್ಟುತ್ತದೆ. ನಾನು ಎಷ್ಟು ಹತಭಾಗ್ಯಳು! ನನ್ನ ಹಣೇಬರಹದಲ್ಲಿ ವೈಧವ್ಯ ವನ್ನು ಅನುಭೋಗಿಸುವದು ಬರೆದಿದ್ದರೆ ಅದರಂತೆ ಆಗಲಿ. ನಾನು ಜೀವ ಕೊಡುವದರಿಂದ ನಿಮಗೆ ನನ್ನ ವಿರಹದಿಂದಾಗುವ ದುಃಖವನ್ನು ನೀವು ಹೇಗೆ ಸಹನ ಮಾಡಿಕೊಂಡೀರಿ? ಮತ್ತೊಂದೇನಂದರೆ, ನಾನು ಸತ್ತರೆ ನನ್ನ ಗಂಡನು ಇನ್ನೊಬ್ಬಳನ್ನು ಮದುವೆ ಮಾಡಿಕೊಂಡು ನನ್ನನ್ನು ಮರೆಯುವದು ನಿಶ್ಚಯವು" ಎಂದು ನುಡಿದಳು. ಆಗ ಸನ್ಯಾಸಿಯು ಆ ರೋಗಿಗೆ-"ನಿನ್ನ ಸಲುವಾಗಿ ಯಾರೂ ಜೀವ ಕೊಡಲಿಕ್ಕೆ ಸಿದ್ಧರಿಲ್ಲ. ಆದುದರಿಂದ ಈ ಜಗತ್ತಿನಲ್ಲಿ ಯಾರನ್ನೂ ನನ್ನವರೆಂದು ನಂಬಬೇಡೆಂದು ನಾನು ಹೇಳಿದ ಮಾತು ಈಗಾದರೂ ತಿಳಿಯಿತೇ?" ಎಂದು ಕೇಳಿದನು. ಆಗ ಆ ಬ್ರಾಹ್ಮಣನು ಎಚ್ಚರಿಕೆಯ ಮೇಲೆ ಬಂದು ವೈರಾಗ್ಯವನ್ನು ಸ್ವೀಕರಿಸಿದನು.

## ತಾತ್ಪರ್ಯ.

ಹೆಂಡರು ಮಕ್ಕಳು, ಬಂಧು ಬಳಗ, ತಾಯಿತಂದೆ ಇವರಲ್ಲಿ ನಾವು ಆಸಕ್ತರಾಗಿರಬಾರದು. ಪರಮೇಶ್ವರನ ಭಕ್ತಿಯಲ್ಲಿ ನಮ್ಮ ಮನಸ್ಸನ್ನು ಇರಿಸಬೇಕು. ಎಲ್ಲರು ಸಂಸಾರವನ್ನು ತ್ಯಾಗಮಾಡಿ ಸನ್ಯಾಸವನ್ನು ಸ್ವೀಕಾರ ಮಾಡುವ ಕಾರಣವಿಲ್ಲ. ಸಂಸಾರದಲ್ಲಿರುವಾಗಲೂ ಪರಮೇಶ್ವರನ ಆರಾಧನೆಯನ್ನು ಮಾಡುತ್ತ ಪರಮೇಶ್ವರನ ಮೆಚ್ಚಿಗೆಗೆ ಪಾತ್ರವಾಗುವಂಥ ಸತ್ಕರ್ಮಗಳನ್ನು ಆಚರಿಸಿದರೆ ಸಾಕು. ಸಂಸಾರದಲ್ಲಿದ್ದು ಸತ್ಯ, ಅಹಿಂಸೆ, ಪರೋಪಕಾರ ಮೊದಲಾದ ಸದ್ಗುಣಗಳುಳ್ಳವರಾಗಿ ನಡೆಯುವದರಿಂದ ಸದ್ಗತಿಯಾಗುವದು.

# ೧೪. ಸಚ್ಚಿದಾನಂದನ ರೂಪಗಳು.

ಒಂದು ಸಾರೆ ಇಬ್ಬರು ಗೃಹಸ್ಥರು ಅಳ್ಳಿಯ ಗಿಡದ ಮೇಲಿನ ಓತೀಕಾಟದ ಬಣ್ಣವು ಎಂಥಾದ್ದಿರುತ್ತದೆಂಬದನ್ನು ಕುರಿತು ತಮ್ಮ ತಮ್ಮೊಳಗೆ ಬಹಳ ವಿವಾದ ಮಾಡಿದರು. ಒಬ್ಬನು-"ಓತೀಕಾಟವು ಕೆಂಪು ಬಣ್ಣದ್ದು ಇರುತ್ತದೆ" ಎಂದು ಹೇಳಿದನು. ಅದಕ್ಕೆ ಇನ್ನೊಬ್ಬನು-"ಛೇ. ನೀನು ಹೇಳುವದು ತಪ್ಪು. ಅದು ನೀಲಿ ಬಣ್ಣದ್ದು ಇರುತ್ತದೆ" ಅಂದನು. ಇವರಿಬ್ಬರೂ ತಮ್ಮೊಳಗೆ ಎಷ್ಟು ಹೊತ್ತು ವಿವಾದ ಮಾಡಿದರೂ ಒಬ್ಬನ ಮಾತಿಗೆ ಇನ್ನೊಬ್ಬನು ಒಪ್ಪಿಕೊಳ್ಳಲಿಲ್ಲ. ಅದುದರಿಂದ ಅವರಿಬ್ಬರೂ ಅಳ್ಳಿಯ ಗಿಡದ ಕೆಳಗೆ ಗುಡಸಲು ಕಟ್ಟಿಕೊಂಡು ಅದರ ಯಾವತ್ತು ಪರೀಕ್ಷೆಯನ್ನು ಮಾಡಿದಂಥ ಮೂರನೇ ಗೃಹಸ್ಥನ ಕಡೆಗೆ ಹೋದರು. ಅಲ್ಲಿ ಒಬ್ಬನು ಆ ಮೂರನೇ ಗೃಹಸ್ಥನಿಗೆ-"ಸ್ವಾಮಿಾ, ಈ ಅಳ್ಳಿಯಗಿಡದ ಮೇಲಿನ ಓತೀಕಾಟವು ಕೆಂಪು ಬಣ್ಣದ್ದು ಇರುವದಿಲ್ಲವೇ?" ಎಂದು ಕೇಳಿದನು. ಅದಕ್ಕೆ ಅವನು "ಹೌದು" ಎಂದು ಉತ್ತರಕೊಟ್ಟನು. ಆಗ ಇನ್ನೊಬ್ಬನು ಅವನಿಗೆ-"ಏನು ಹೇಳುತ್ತೀ? ಅದು ಕೆಂಪು ಬಣ್ಣದ್ದು ಇರುವದಿಲ್ಲ. ನೀಲಿ ಬಣ್ಣದ್ದು ಇರುತ್ತದೆ" ಅಂದನು. ಇದನ್ನು ಕೇಳಿ ಆ ಮೂರನೇ ಗೃಹಸ್ಥನು ವಿನಯದಿಂದ-"ಹೌದು. ಅದು ನೀಲಿ ಬಣ್ಣದ್ದು ಇರುತ್ತದೆ" ಎಂದು ಉತ್ತರ ಕೊಟ್ಟನು. ಈ ಪ್ರಕಾರ ಆ ಮೂರನೇ ಗೃಹಸ್ಥನು ತನಗೆ ಓತೀಕಾಟವು ಯಾವಾಗಲು ತನ್ನ ಬಣ್ಣವನ್ನು ಬದಲಿಸುತ್ತದೆಂಬದು ಗೊತ್ತಿದ್ದ ಕಾರಣ ಅವನು ಇಬ್ಬರಿಗೂ "ಹೌದು" ಎಂದು ಉತ್ತರಕೊಟ್ಟನು.

## ತಾತ್ಪರ್ಯ.

ಸಚ್ಚಿದಾನಂದ ಮೂರ್ತಿಗೆ ಅನೇಕ ರೂಪಗಳು ಇರುತ್ತವೆ. ಆತನನ್ನು ಒಂದು ರೂಪದಲ್ಲಿ ನೋಡಿದ ಭಕ್ತನು ಆತನ ರೂಪವು ಅದೊಂದೇ ಪ್ರಕಾರದಿಂದ ಇರುತ್ತದೆಂದು ಹೇಳುತ್ತಾನೆ. ಆದರೆ ಆತನನ್ನು ಬೇರೆ ಬೇರೆ ರೂಪಗಳಲ್ಲಿ ನೋಡಿದ ಭಕ್ತನು-"ಪರಮೇಶ್ವರನಿಗೆ ಅನಂತ ರೂಪಗಳು ಇರುವದರಿಂದ ಈ ಎಲ್ಲ ರೂಪಗಳು ಆತನವೇ ಇರುತ್ತವೆ" ಎಂದು ಹೇಳುತ್ತಾನೆ.

## ೧೫. ಯಾತ್ರೆಗೆ ಹೋದ ಗಂಡಹೆಂಡರು.

ಒಂದು ಸಾರೆ ಒಬ್ಬ ಗಂಡನೂ ಹೆಂಡತಿಯೂ ತಮ್ಮ ಸಂಸಾರವನ್ನು ತ್ಯಾಗ ಮಾಡಿ, ತೀರ್ಥಯಾತ್ರೆಗಳನ್ನು ಮಾಡಿಕೊಂಡು ಬರಲಿಕ್ಕೆ ಹೊರಟರು. ಅವರಿಬ್ಬರೂ ದಾರಿಯಿಂದ ನಡೆದು ಹೋಗುತ್ತಿರಲು ಗಂಡನು ಒಂದು ವಜ್ರದ ಹರಳು ನೆಲದ ಮೇಲೆ ಬಿದ್ದಿರುವದನ್ನು ಕಂಡನು. ಆ ಕೂಡಲೆ ಅವನು ತನ್ನ ಮನಸ್ಸಿನೊಳಗೆ-“ಇದು ನನ್ನ ಹೆಂಡತಿಯ ಕಣ್ಣಿಗೆ ಬಿದ್ದರೆ ಒಂದು ವೇಳೆ ಆಕೆಗೆ ಇದರ ಮೇಲೆ ಆಶೆಯು ಹುಟ್ಟೀತು. ಇದರಿಂದ ನಮಗೆ ಸಂಸಾರ ತ್ಯಾಗ ಮಾಡಿದ ಹಾಗೂ ತೀರ್ಥಯಾತ್ರೆಗಳನ್ನು ಮಾಡಿದ ಪುಣ್ಯವು ನಷ್ಟವಾದೀತು” ಎಂದು ಆಲೋಚಿಸಿ ಆ ವಜ್ರದ ಹರಳನ್ನು ಮುಚ್ಚಬೇಕೆಂದು ತನ್ನ ಕಾಲಿನಿಂದ ಮಣ್ಣು ಸರಿಸಲಿಕ್ಕೆ ಹತ್ತಿದ್ದನು. ಈ ಪ್ರಕಾರ ಗಂಡನು ಮಾಡುತ್ತಿರುವದನ್ನು ನೋಡಿ ಹೆಂಡತಿಯು ಅವನಿಗೆ-“ಏನು ಮಾಡುತ್ತೀರಿ?” ಎಂದು ಕೇಳಿದಳು. ಅದಕ್ಕೆ ಅವನು ಏನೋ ಒಂದು ವಿಧವಾಗಿ ತಪ್ಪಿಸಿಕೊಂಡು ಉತ್ತರ ಕೊಟ್ಟನು. ಆದರೆ ಆಕೆಗೆ ಹೇಗೂ ಆ ವಜ್ರದ ಹರಳು ಅಲ್ಲಿ ಇರುವದು ಕಂಡಿತು. ಆಗ ಆಕೆಯು-“ನಿಮಗೆ ಇನ್ನೂ ವಜ್ರದಲ್ಲಿಯೂ ಭೂಮಿಯಲ್ಲಿಯೂ ಭೇದವು ಕಾಣುತ್ತಿದ್ದರೆ ಸಂಸಾರ ತ್ಯಾಗವನ್ನು ಏಕೆ ಮಾಡಿದಿರಿ?” ಎಂದು ಕೇಳಿದಳು.

### ತಾತ್ಪರ್ಯ.

ಮನಸ್ಸಿನ ದುರ್ವ್ಯಾಪಾರಗಳು ಹೋಗಲಿಕ್ಕೆ ಸತ್ಸಂಗತಿಯು ಮತ್ತು ಸತ್ಕಥಾಶ್ರವಣವು ಅವಶ್ಯವಿರುತ್ತವೆ. ಕ್ಷೇತ್ರಗಳಿಗೆ ಹೋಗುವ ಉದ್ದೇಶವಾದರೂ ಇದೇ ಇರುತ್ತದೆ. ನಾವು ಕಾಶೀರಾಮೇಶ್ವರಗಳಿಗೆ ಹೋದರೂ ಅರಿಷಡ್ವೈರಿಗಳನ್ನು ಬಿಡದಿದ್ದರೆ ನಮಗೆ ಯಾತ್ರೆಗಳಿಗೆ ಹೋಗಿ ಬಂದ ಪುಣ್ಯವು ಎಂದಿಗೂ ಬರಲಾರದು.

---

## ೧೬. ಮುಂದೆ ಹೋಗು.

ಒಬ್ಬ ಕಟ್ಟಿಗೆ ಮಾರುವವನು ದಿನಾಲು ಅಡವಿಗೆ ಹೋಗಿ ಕಟ್ಟಿಗೆಯನ್ನು ಕಡಕೊಂಡು ಬಂದು ಅದರ ಮಾರಾಟದಿಂದ ಬಂಡ ಸ್ವಲ್ಪ ಹಣದಿಂದಲೇ

ಒಡರೀತಿಯಿಂದ ಹೊಟ್ಟೆತುಂಬಿಕೊಂಡು ಇರುತ್ತಿದ್ದನು. ಒಂದು ಸಾರೆ ಒಬ್ಬ ಸನ್ಯಾಸಿಯು ಆ ಅಡವಿಯಿಂದ ಹೋಗುವಾಗ ಅವನು ಕಟ್ಟಿಗೆ ಕಡಿಯುವದನ್ನು ನೋಡಿ–"ತಮ್ಮಾ, ನೀನು ಈ ಅಡವಿಯಲ್ಲಿ ಇನ್ನೂ ಮುಂದೆ ಹೋಗು. ಅಂದರೆ ನಿನಗೆ ಹೆಚ್ಚು ಲಾಭವಾಗುವದು" ಎಂದು ಹೇಳಿದನು. ಅದರಂತೆ ಆ ಕಟ್ಟಿಗೆ ಕಡಿಯುವವನು ಸ್ವಲ್ಪ ಮುಂದೆ ಹೋಗಲು ಅವನಿಗೆ ಗಂಧದ ಮರಗಳು ಕಾಣಿಸಿದವು. ಅವುಗಳನ್ನು ನೋಡಿ ಅವನು ಬಹಳ ಸಂತೋಷಪಟ್ಟು ಅವುಗಳನ್ನು ಕಡಿದು ಊರೊಳಗೆ ಒಯ್ದು ಮಾರಲಾಗಿ ಅವನಿಗೆ ಸಂತೆಯಲ್ಲಿ ಮೊದಲಿನಕಿಂತ ಬಹಳ ಬೆಲೆಯು ಬಂದಿತು. ಮರುದಿವಸ ಅವನು ತನಗೆ ಸನ್ಯಾಸಿಯು ಬರೀ ಗಂಧದ ಮರಗಳ ಬಗ್ಗೆ ಹೇಳಲಿಲ್ಲವೆಂತಲೂ, ಅಡವಿಯಲ್ಲಿ ಇನ್ನೂ ಮುಂದೆ ಹೋಗೆಂದು ಹೇಳಿರುತ್ತಾನೆಂತಲೂ ವಿವೇಕದಿಂದ ತಿಳಿದುಕೊಂಡು ಆ ಗಂಧದ ಮರಗಳನ್ನು ದಾಟಿ ಮತ್ತಿಷ್ಟು ಮುಂದೆ ಹೋದನು. ಆಗ ಅವನಿಗೆ ತಾಮ್ರದ ಒಂದು ಖನಿಯು ಸಿಕ್ಕಿತು. ಅಲ್ಲಿಂದ ಅವನು ತನಗೆ ಶಕ್ಯವಿದ್ದಷ್ಟು ತಾಮ್ರವನ್ನು ತೆಗೆದುಕೊಂಡು ಹೋಗಿ ಸಂತೆಯಲ್ಲಿ ಮಾರಲಾಗಿ ಅವನಿಗೆ ಮೊದಲಿನಕಿಂತ ಎಷ್ಟೋ ಪಾಲು ಹೆಚ್ಚು ಬೆಲೆಯು ಬಂದಿತು. ಈ ಪ್ರಕಾರ ಆವನು ದಿನದಿನಕ್ಕೆ ಆ ಅಡವಿಯಲ್ಲಿ ಮುಂದೆ ಹೋಗಲು ಅವನಿಗೆ ಒಂದು ದಿವಸ ಬೆಳ್ಳಿಯ ಖನಿಯು, ಇನ್ನೊಂದು ದಿವಸ ಬಂಗಾರದ ಖನಿಯು, ಕೊನೆಗೆ ವಜ್ರದ ಖನಿಯು ಸಿಕ್ಕದ್ದರಿಂದ ಆವನು ಅವುಗಳನ್ನೆಲ್ಲ ಮಾರಾಟ ಮಾಡಿ ಬಹಳ ಶ್ರೀಮಂತನಾದನು.

## ತಾತ್ಪರ್ಯ.

ಪ್ರಯತ್ನವನ್ನು ಮಾಡುವವನಿಗೆ ಪರಮೇಶ್ವರನು ಫಲವನ್ನು ಕೊಡುವನು. ಆದರೆ ಪ್ರಯತ್ನಕ್ಕೆ ದೈವವು ಅಂದರೆ ಪರಮೇಶ್ವರನ ಕೃಪೆಯು ಅನುಕೂಲವಿರಬೇಕು. ಅಂದರೆ ಅವನಿಗೆ ಯಾವತ್ತು ಸಿದ್ಧಿಯಾಗುವದು. ಜ್ಞಾನವನ್ನು ಸಂಪಾದಿಸುವ ಲವಲವಿಕೆಯುಳ್ಳವರು ಪ್ರಯತ್ನ ಮಾಡಿದರೆ ಅವರಿಗೆ ಜ್ಞಾನದ ಖನಿಯು ದೊರಕಿ, ಸತ್ಯವೂ ಶಾಶ್ವತವೂ ಆದ ಪರಮೇಶ್ವರನ ಜ್ಞಾನದ ಪ್ರಾಪ್ತಿಯು ಆಗುವದು.

# ೧೭. ಒಂದು ಹುಲಿಯ ಮರಿಯು.

ಒಂದಾನೊಂದು ಗಬ್ಬ ಇದ್ದ ಹೆಣ್ಣು ಹುಲಿಯು ಆಡುಗಳ ಹಿಂಡನ್ನು ಕೊಲ್ಲುವದಕ್ಕಾಗಿ ಅವುಗಳ ಮೇಲೆ ಜಿಗಿಯುವಾಗ ಅಕಸ್ಮಾತ್ತಾಗಿ ಈಯಿತು. ಈ ಪ್ರಕಾರ ಅದು ಈದನಂತರ ಅದನ್ನು ಒಬ್ಬಾನೊಬ್ಬ ಬೇಟೆಗಾರನು ಹೊಡೆದು ಕೊಂದದ್ದರಿಂದ ಆ ಹುಲಿಯ ಮರಿಯು ಆಡುಗಳ ಹಿಂಡಿನಲ್ಲಿಯೇ ಉಳಿಯಿತು. ಅದು ಅಲ್ಲಿರುವಾಗ ಮಿಕ್ಕ ಆಡುಗಳಂತೆ ಹುಲ್ಲು ತಿಂದು ಅವುಗಳಂತೆ ತಾನೂ ಬ್ಯಾ ಎಂದು ಒದರುವದನ್ನು ಕಲಿಯಿತು. ಈ ಪ್ರಕಾರ ಆ ಹುಲಿಯ ಮರಿಯು ಬೆಳೆದು ದೊಡ್ಡದಾದ ಬಳಿಕ ಒಂದು ದಿವಸ ಮತ್ತೊಂದು ದೊಡ್ಡ ಹುಲಿಯು ಈ ಆಡುಗಳ ಹಿಂಡಿನ ಮೇಲೆ ಅಭಿಯೋಗ ಮಾಡಿದಾಗ ಆ ಹುಲ್ಲು ತಿನ್ನುವ ಹುಲಿಯ ಮರಿಯನ್ನು ನೋಡಿ ಬಹಳ ಆಶ್ಚರ್ಯಪಟ್ಟು ಅದರ ಬೆನ್ನ ಹತ್ತಿ ಓಡಿ ಅದನ್ನು ಹಿಡಿಯಿತು. ಆಗ ಆ ಹುಲ್ಲು ತಿನ್ನುವ ಹುಲಿಯ ಮರಿಯು ಬ್ಯಾ ಎಂದು ಒದರಲಿಕ್ಕೆ ಹತ್ತಿತು. ಆಗ ಹುಲಿಯು ಆ ಹುಲ್ಲು ತಿನ್ನುವ ಹುಲಿಯ ಮರಿಯನ್ನು ಒಂದು ಹಳ್ಳದ ಹತ್ತರ ತೆಗೆದುಕೊಂಡು ಬಂದು ಅದನ್ನು ಉದ್ದೇಶಿಸಿ—"ಈ ನೀರೊಳಗೆ ನಿನ್ನ ಮೋರೆಯನ್ನು ನೋಡಿಕೋ. ನಿನ್ನ ಮೋರೆಯೂ ನನ್ನ ಮೋರೆಯೂ ಒಂದೇ ಇರುತ್ತವೆ. ಈ ಮಾಂಸದ ಕರಣೆಯನ್ನು ಸ್ವಲ್ಪ ತಿನ್ನು" ಎಂದು ಹೇಳಿ ಬಲಾತ್ಕಾರದಿಂದ ಆ ಮಾಂಸದ ಕರಣೆಯನ್ನು ಅದರ ಬಾಯಲ್ಲಿ ಹಾಕಿತು. ಆದರೆ ಆ ಹುಲ್ಲು ತಿನ್ನುವ ಹುಲಿಯ ಮರಿಯು ಮೊದಲಿಗೆ ಅದನ್ನು ತಿನ್ನದೆ ಸುಮ್ಮನೆ ನಿಂತುಕೊಂಡು ಕೆಲವು ಹೊತ್ತು ಬ್ಯಾ ಬ್ಯಾ ಎಂದು ಒದರಲಿಕ್ಕೆ ಹತ್ತಿತು. ಮುಂದೆ ಅದಕ್ಕೆ ರಕ್ತದ ರುಚಿಯು ಹತ್ತಿದ್ದರಿಂದ ಅದು ಆ ಮಾಂಸದ ಕರಣೆಯನ್ನು ತಿನ್ನಲಿಕ್ಕೆ ಹತ್ತಿತು. ಆಗ ಹುಲಿಯು ಮುಂಚೆ ಹುಲ್ಲು ತಿನ್ನುತ್ತಿದ್ದ ಹುಲಿಯ ಮರಿಗೆ—"ತಮ್ಮಾ, ನಾನೂ ನೀನೂ ಒಂದೇ ಇರುತ್ತೇವೆಂದು ಈಗಾದರೂ ಮನಗಂಡಿಯಾ? ಇನ್ನುಮೇಲೆ ನಾವಿಬ್ಬರೂ ಕೂಡಿ ಅಡವಿಯಲ್ಲಿ ಆಡ್ಯಾಡೋಣ ನಡೆ" ಎಂದು ಅದನ್ನು ಕರೆದುಕೊಂಡು ಹೋಯಿತು.

## ತಾತ್ಪರ್ಯ.

ಸದ್ಗುರುವಿನ ಕೃಪೆಯಾದ ಬಳಿಕ ನಾವು ಯಾವದಕ್ಕೂ ಅಂಜಬೇಕಾಗುವದಿಲ್ಲ. ನಾವು ಯಾರು ಇರುತ್ತೇವೆಂಬುವದನ್ನೂ, ನಮ್ಮ ನಿಜವಾದ ಗುಣ

ವು ಏನಿರುತ್ತದೆಂಬುವದನ್ನೂ ಅವನೇ ನಮಗೆ ಜ್ಞಾನ ಮಾಡಿಕೊಡುವನು. ಮನುಷ್ಯನು ಆತ್ಮಜ್ಞಾನದ ಸಾಧನ ಮಾಡುವದನ್ನು ಆರಂಭಿಸಿದರೆ ಅವನು ತಾನಾಗಿಯೇ ಯಾವದು ಸತ್ಯವು, ಯಾವದು ಮಿಥ್ಯವು, ([illegible]ಹ್ಮ [illegible], ಜಗನ್ಮಿಥ್ಯಾ) ಎಂಬದನ್ನು ತಿಳಿದುಕೊಳ್ಳುವನು.

---

## ೧೮. ಒಬ್ಬ ಗೊಲ್ಲತಿಯ ಭಕ್ತಿಯು.

ಒಬ್ಬ ಗೊಲ್ಲತಿಯು ದಿನಾಲು ಒಂದು ನದಿಯ ಆಚೆಯ ದಂಡೆಯಿಂದ ಬಂದು ಒಬ್ಬ ಬ್ರಾಹ್ಮಣನಿಗೆ ಹಾಲು ಕೊಡುತ್ತಿದ್ದಳು. ನದಿಯಲ್ಲಿ ಹರಗೋಲು ನಡಿಸುವವರು ಹೊತ್ತಿಗೆ ಹರಗೋಲವನ್ನು ನಡಿಸದೆ ಇರುವ ಮೂಲಕ ಒಮ್ಮೊಮ್ಮೆ ಆಕೆಗೆ ಬರಲಿಕ್ಕೆ ತಡವಾಗುತ್ತಿತ್ತು. ಒಂದು ದಿವಸ ಆ ಬ್ರಾಹ್ಮಣನು ಆ ಗೊಲ್ಲತಿಗೆ-“ ಈ ಪ್ರಕಾರ ಯಾಕೆ ತಡಮಾಡುತ್ತೀ?” ಎಂದು ಕೇಳಿದನು. ಅದಕ್ಕೆ ಅವಳು ಅಂಬಿಗರು ಹೊತ್ತಿಗೆ ಸರಿಯಾಗಿ ಬಂದು ಹರಗೋಲು ನಡಿಸುವದಿಲ್ಲವೆಂದು ಹೇಳಿದಳು. ಆಗ ಅವನು—“ ಅವ್ವಾ, ಜನರು ಪರಮೇಶ್ವರನ ಹೆಸರು ತೆಗೆದುಕೊಂಡು ಸಂಸಾರವೆಂಬ ಮಹಾಸಾಗರವನ್ನು ದಾಟುತ್ತಾರೆ. ಅಂದಬಳಿಕ ನಿನಗೆ ಆತನ ಹೆಸರು ತೆಗೆದುಕೊಂಡು ಸಣ್ಣ ನದಿಯನ್ನು ದಾಟಲಿಕ್ಕೆ ಆಗುವದಿಲ್ಲವೇ?” ಎಂದು ಕೇಳಿದನು. ಮರುದಿವಸದಿಂದ ಆ ಗೊಲ್ಲತಿಯು ವೇಳೆಗೆ ಸರಿಯಾಗಿ ಬಂದು ಆ ಬ್ರಾಹ್ಮಣನಿಗೆ ಹಾಲು ಕೊಡಲಿಕ್ಕೆ ಹತ್ತಿದಳು. ಇದನ್ನು ಕಂಡು ಆ ಬ್ರಾಹ್ಮಣನು ಒಂದು ದಿವಸ ಆಕೆಗೆ-“ ಈಗ ಯಾಕೆ ನಿನಗೆ ತಡವಾಗುವದಿಲ್ಲ?” ಎಂದು ಕೇಳಿದನು. ಅದಕ್ಕೆ ಅವಳು—“ ಸ್ವಾಮಿಾ, ನೀವು ಹೇಳಿದಂದಿನಿಂದ ನಾನು ಅಂಬಿಗರ ದಾರಿಯನ್ನು ನೋಡದೆ ಪರಮೇಶ್ವರನ ಹೆಸರು ತೆಗೆದುಕೊಂಡು ನದಿಯನ್ನು ದಾಟಿ ಬರುತ್ತೇನೆ” ಎಂದು ಹೇಳಿದಳು. ಇದನ್ನು ಆ ಬ್ರಾಹ್ಮಣನು ನಂಬದೆ ಅದನ್ನು ನೋಡಲಿಕ್ಕೆ ಅವಳ ಸಂಗಡ ಹೋಗಿ ಅವಳಂತೆಯೇ ತಾನೂ ಆ ನದಿಯ ಮೇಲೆ ನಡೆಯಲಿಕ್ಕೆ ಹತ್ತಲು ನೀರೊಳಗೆ ಮುಳುಗಹತ್ತಿದನು. ಆಗ ಆ ಗೊಲ್ಲತಿಯು ಆ ಬ್ರಾಹ್ಮಣನ ಶೋಚನೀಯ ಅವಸ್ಥೆಯನ್ನು ಕಂಡು—“ ಸ್ವಾಮಿಾ, ಇದೇನು? ನೀವು

ಬಾಯಿಂದ ದೇವರ ಹೆಸರು ಉಚ್ಚಾರ ಮಾಡುತ್ತಿದ್ದರೂ ನಿಮ್ಮ ದೋತರವು ತೋಯ್ದು ಒದ್ದೆಯಾಗಬಾರದೆಂದು ಅದನ್ನು ಮೇಲಕ್ಕೆ ಎತ್ತಿ ಹಿಡಿದಿರುವಿರಿ! ನಿಮಗೆ ದೇವರ ಮೇಲೆ ಪೂರ್ಣ ನಂಬಿಗೆಯು ಇದ್ದಂತೆ ಕಂಡುಬರುವದಿಲ್ಲ." ಎಂದು ನುಡಿದಳು. ಇದನ್ನು ಕೇಳಿ ಆ ಬ್ರಾಹ್ಮಣನು ನಾಚಿಕೊಂಡು ಸುಮ್ಮನಾದನು.

### ತಾತ್ಪರ್ಯ.

ಪರಮೇಶ್ವರನ ಮೇಲೆ ಪೂರ್ಣವಾದ ನಂಬಿಗೆಯನ್ನು ಇಡುವವನಿಗೆ ಮಾತ್ರ ಆತನು ತನ್ನ ಚಮತ್ಕಾರಗಳನ್ನು ತೋರಿಸುತ್ತಾನೆ. ಜನರಿಗೆ ಮಾತ್ರ ಬ್ರಹ್ಮಜ್ಞಾನವನ್ನು ಹೇಳಿ ತಾವು ಕಲ್ಲಿನ ಬಂಡೆಯಂತೆ ಇರುವದು ಕೇವಲ ಹಾಸ್ಯಾಸ್ಪದವಾಗಿರುವದು. ನುಡಿಯಂತೆ ನಡೆಯುವವನೇ ಎಲ್ಲರಿಗೂ ಪೂಜ್ಯನಾಗುತ್ತಾನೆ.

---

## ೧೯. ದೇವರು ನೈವೇದ್ಯವನ್ನು ಉಂಡದ್ದು.

ಒಬ್ಬಾನೊಬ್ಬ ಬ್ರಾಹ್ಮಣನು ಒಂದು ದೇವರ ಗುಡಿಯ ಪೂಜಾರಿ ಇದ್ದನು. ಅವನು ಏನೋ ಕಾರಣದಿಂದ ಪರಸ್ಥಳಕ್ಕೆ ಹೋಗಬೇಕಾಯಿತು. ಆಗ ಅವನು ತನ್ನ ಮಗನಿಗೆ–"ನಾನು ಬರುವವರೆಗೆ ನೀನು ದೇವರ ಪೂಜೆಯನ್ನು ಚನ್ನಾಗಿ ಮಾಡಿ ಅವನಿಗೆ ಭಕ್ತಿಯಿಂದ ನೈವೇದ್ಯವನ್ನು ಅರ್ಪಿಸು" ಎಂದು ಹೇಳಿದನು. ಇದರಂತೆ ಆ ಹುಡುಗನು ದೇವರ ಪೂಜೆಯನ್ನು ಮಾಡಿ ದೇವರಿಗೆ ನೈವೇದ್ಯವನ್ನು ಅರ್ಪಿಸಿ ಅವನ ಮುಂದೆ ಕುಳಿತುಕೊಂಡನು. ಆ ಹುಡುಗನಿಗೆ ತಾನು ನೈವೇದ್ಯವನ್ನು ಅರ್ಪಿಸಿದ ಬಳಿಕ ದೇವರು ಅಲ್ಲಿ ಪ್ರತ್ಯಕ್ಷವಾಗಿ ಬಂದು ತನ್ನ ನೈವೇದ್ಯವನ್ನು ಉಣ್ಣುತ್ತಾನೆಂಬ ವಿಶ್ವಾಸವಿತ್ತು. ಆದುದರಿಂದ ಅವನು ದೇವರಿಗೆ–"ಪರಮೇಶ್ವರನೇ! ತೀವ್ರವಾಗಿ ಬಂದು ನಾನು ತಂದ ನೈವೇದ್ಯವನ್ನು ಉಣ್ಣು. ನಾನು ಬಂದು ಬಹಳ ಹೊತ್ತಾಯಿತು. ಇನ್ನು ಮೇಲೆ ನಾನು ಹೆಚ್ಚು ಹೊತ್ತು ಇಲ್ಲಿ ಕೂತುಕೊಳ್ಳಲಾರೆನು" ಎಂದು ಅವನಿಗೆ

ಪ್ರಾರ್ಥನೆಯನ್ನು ಮಾಡಿದನು ಆದರೂ ದೇವರು ಅಲ್ಲಿಗೆ ಬರಲಿಲ್ಲ; ಅಥವಾ ಅವನ ಕೂಡ ಏನೂ ಮಾತಾಡಲಿಲ್ಲ. ಆಗ ಅವನು ಕೆಲವು ಹೊತ್ತು ಬಿಕ್ಕಿ ಬಿಕ್ಕಿ ಅತ್ತು–“ ದೇವರೇ, ನಮ್ಮ ತಂದೆಯು ನಿನಗೆ ನೈವೇದ್ಯವನ್ನು ಚನ್ನಾಗಿ ಉಣ್ಣಿಸಿ ನಿನ್ನನ್ನು ಶಾಂತ ಮಾಡೆಂದು ನನಗೆ ಅಪ್ಪಣೆ ಮಾಡಿರುತ್ತಾನೆ. ನಮ್ಮ ತಂದೆಯು ನಿನಗೆ ನೈವೇದ್ಯವನ್ನು ಅರ್ಪಣ ಮಾಡಿದಾಗ ನೀನು ಬಂದು ಉಣ್ಣುವೆ. ಆದರೆ ನಾನು ತಂದಿದ್ದ ನೈವೇದ್ಯವನ್ನು ನೀನು ಉಣ್ಣಲೊಲ್ಲೆ. ನಾನೇನು ಅಂಥ ಅಪರಾಧವನ್ನು ಮಾಡಿರುವೆ?” ಎಂದು ದೈನ್ಯಭಾವದಿಂದ ಅವನನ್ನು ಕುರಿತು ಬಹಳ ಪರಿಯಿಂದ ಬೇಡಿಕೊಂಡನು. ಆಗ ಪರಮೇಶ್ವರನು ಮನುಷ್ಯರೂಪದಿಂದ ಅಲ್ಲಿಗೆ ಬಂದು ಆ ಹುಡುಗನು ತಂದಿದ್ದ ನೈವೇದ್ಯವನ್ನು ಉಂಡು ಹೋದನು. ಆ ಬಳಿಕ ಆ ಹುಡುಗನು ಗುಡಿಯೊಳಗಿಂದ ಮನೆಗೆ ಬರಲಾಗಿ ಅವನ ಮನೆಯವರು–“ ನೈವೇದ್ಯವು ಏನಾಯಿತು? ಅದನ್ನು ಎಲ್ಲಿ ಬಿಟ್ಟು ಬಂದೆ?” ಎಂದು ಕೇಳಿದರು. ಆಗ ಆ ಹುಡುಗನು–“ ಅದನ್ನು ದೇವರು ಉಂಡನು” ಎಂದು ತನ್ನ ಭಾವಿಕತನದಿಂದ ಉತ್ತರ ಕೊಟ್ಟನು. ಇದನ್ನು ಕೇಳಿ ಅವನ ಮನೆಯವರಿಗೆ ಆಶ್ಚರ್ಯವಾಗಿ ಅವರು ಗುಡಿಗೆ ಬಂದು ನೋಡಲಾಗಿ ಆ ಹುಡುಗನು ದೇವರ ಮುಂದೆ ಇಟ್ಟಿದ್ದ ನೈವೇದ್ಯದ ಎಡೆಯು ತೆರವಾಗಿರುವದನ್ನು ನೋಡಿ ಅವರು ಬಹಳ ಆಶ್ಚರ್ಯಪಟ್ಟು ಏನೂ ಮಾತಾಡದೆ ಸುಮ್ಮನಾದರು.

### ತಾತ್ಪರ್ಯ.

ಪರಮೇಶ್ವರನ ಮೇಲೆ ನಿಜವಾದ ವಿಶ್ವಾಸವಿಟ್ಟು ಆತನನ್ನು ಭಕ್ತಿಯಿಂದ ಬೇಡಿಕೊಳ್ಳುವವರಿಗೆ ಆತನು ನಿಶ್ಚಯವಾಗಿ ಫಲವನ್ನು ಕೊಡುತ್ತಾನೆ.

---

## ೨೦. ಪರಮೇಶ್ವರನ ಕೃಪೆಯೇ ಕಾಮಧೇನುವು.

ಒಂದು ದಿವಸ ಒಬ್ಬ ಗೃಹಸ್ಥನ ಮಗನು ಬೇನೆಯಿಂದ ಮರಣಾವಸ್ಥೆಗೆ ಬಂದಿದ್ದನು. ಆಗ ಒಬ್ಬ ಸಾಧುವು ಆ ಗೃಹಸ್ಥನಿಗೆ–“ ನಿನ್ನ ಮಗನನ್ನು ಜೀವದಿಂದ ಬದುಕಿಸಲಿಕ್ಕೆ ಒಂದು ಉಪಾಯವದೆ. ನೀನು ಒಬ್ಬ ಸತ್ತ ಮನುಷ್ಯನ

ತಲೆ ಬುರಡಿಯೊಳಗೆ ಸ್ವಾತೀಮಳೆಯ ಹನಿಗಳೂ, ನಾಗರಹಾವಿನ ವಿಷವೂ ಕೂಡಿರುವದನ್ನು ತಂದುಕೊಟ್ಟರೆ ನಾನು ನಿನ್ನ ಮಗನನ್ನು ಬದುಕಿಸುತ್ತೇನೆ" ಎಂದು ಹೇಳಿದನು. ಇದನ್ನು ಕೇಳಿ ಆ ಗೃಹಸ್ಥನು ತನ್ನ ಮಗನ ಜೀವವನ್ನು ಉಳಿಸುವದಕ್ಕಾಗಿ ಈ ಕೊನೆಯ ಪ್ರಯತ್ನವನ್ನು ಮಾಡಬೇಕೆಂದು ನಿಶ್ಚಯ ಮಾಡಿದನು. ಮರುದಿವಸವೇ ಸ್ವಾತೀ ನಕ್ಷತ್ರವು ಬಂತು. ಆಗ ಅವನು— "ಪರಮೇಶ್ವರನೇ, ಸ್ವಾತೀ ನಕ್ಷತ್ರವಂತೂ ಬಂದಿತು. ನೀನು ಹೇಗಾದರೂ ಮಾಡಿ ನನ್ನ ಪ್ರಯತ್ನವನ್ನು ಸಿದ್ಧಿಗೆ ಒಯ್ದು ನನ್ನ ಮಗನಿಗೆ ಜೀವದಾನ ಕೊಡು" ಎಂದು ಬೇಡಿಕೊಂಡು ಸಾಧುವು ಹೇಳಿದ ಪದಾರ್ಥವನ್ನು ಹುಡುಕಿ ತರಲಿಕ್ಕೆ ಅಡವಿಯೊಳಗೆ ಹೋದನು. ಅಲ್ಲಿ ಒಂದು ಗಿಡದ ಕೆಳಗೆ ಒಬ್ಬ ಸತ್ತ ಮನುಷ್ಯನ ತಲೆಬುರಡಿಯು ಬಿದ್ದಿತ್ತು. ಆಗ ಅವನು ಪರಮೇಶ್ವರನಿಗೆ ಪ್ರಾರ್ಥಿಸುತ್ತ ಸ್ವಲ್ಪ ದೂರ ನಿಂತಿರಲು ಸ್ವಾತೀ ಮಳೆಯಾಗಿ ಆ ತಲೆ ಬುರಡಿಯೊಳಗೆ ನೀರಹನಿಗಳು ಬಿದ್ದವು. ಇದನ್ನು ನೋಡಿ ಅವನು-"ದೇವರೆ, ಇನ್ನು ನೀನು ಉಳಿದದ್ದನ್ನು ಅನುಗ್ರಹ ಮಾಡು" ಎಂದು ಬೇಡಿಕೊಂಡನು. ಆ ಬಳಿಕ ಸ್ವಲ್ಪ ಹೊತ್ತಿನಲ್ಲಿಯೇ ಆ ತಲೆ ಬುರಡಿಯ ಹತ್ತರ ಒಂದು ಕಪ್ಪೆಯು ಒಂದು ಕುಳಿತದ್ದನ್ನು ಕಂಡು ಅವನು ತಿರುಗಿ ಪರಮೇಶ್ವರನಿಗೆ ಪ್ರಾರ್ಥನೆ ಮಾಡಿದನು. ಆಗ ಹುಲ್ಲಿನೊಳಗಿಂದ ಒಂದು ನಾಗರ ಹಾವು ಆ ಕಪ್ಪೆಯನ್ನು ಹಿಡಿಯಲಿಕ್ಕೆ ಬರಲಾಗಿ ಅದು ಆ ತಲೆ ಬುರಡಿಯ ಮೇಲಿಂದ ಜಿಗಿದು ಹೋಯಿತು. ಇದರಿಂದ ಆ ಹಾವಿನ ವಿಷವು ಅಲ್ಲಿ ಇದ್ದ ತಲೆ ಬುರಡಿಯಲ್ಲಿ ಬಿದ್ದಿತು. ಆಗ ಅವನು ಅತ್ಯಂತ ಸಂತೋಷಭರಿತನಾಗಿ-"ಎಲೈ ದಯಾಸಾಗರನಾದ ಭಗವಂತನೇ! ನಿನ್ನ ಕೃಪೆಯಿಂದ ಅಸಂಭವನೀಯ ಸಂಗತಿಗಳು ಸಹ ಸಂಭವನೀಯವಾಗುತ್ತವೆ. ಇನ್ನು ನನ್ನ ಮಗನು ಬದಕುವದೇ ನಿಜವು" ಎಂದು ನುಡಿದು ಅದನ್ನು ತೆಗೆದುಕೊಂಡು ಹೋಗಿ ಸಾಧುವಿಗೆ ಕೊಡಲಾಗಿ ಆ ಸಾಧುವು ಅವನ ಮಗನ ಜೀವವನ್ನು ಬದುಕಿಸಿದನು.

## ತಾತ್ಪರ್ಯ.

ವಿಶ್ವಾಸದಂತೆ ಫಲವು ದೊರಕುತ್ತದೆ. ಪರಮೇಶ್ವರನಲ್ಲಿ ವಿಶ್ವಾಸವಿಟ್ಟವರಿಗೆ ಎಂದೂ ನಿರಾಶೆಯಾಗಬೇಕಾಗುವದಲ್ಲ.

# ೨೧. ಆನೆಯೂ ದೇವರು! ಮಾವುತನೂ ದೇವರು!

ಭಗವಾನ್ ರಾಮಕೃಷ್ಣ ಪರಮಹಂಸರು ಒಂದು ಸಾರೆ ಒಬ್ಬ ಶಿಷ್ಯನಿಗೆ–"ಜೀವಾತ್ಮನು ಪರಮಾತ್ಮನು ಇರುತ್ತಾನೆ" ಎಂದು ಹೇಳಿದರು. ಇದನ್ನು ಆ ಶಿಷ್ಯನು ಅಕ್ಷರಶಃ ಅರ್ಥ ಮಾಡಿಕೊಂಡು ಒಂದು ದಿವಸ ದಾರಿಯೊಳಗೆ ಒಂದು ಆನೆಯು ತನ್ನ ಮೈಮೇಲೆ ಏರಿ ಒಂದಾಗ್ಯೂ ತಾನು ಹಿಂದಕ್ಕೆ ಸರಿದುಕೊಳ್ಳಲಿಲ್ಲ. ಆಗ ಆ ಆನೆಯ ಮೇಲೆ ಕುಳಿತಿದ್ದ ಮಾವುತನು ಅವನಿಗೆ-"ಹಿಂದಕ್ಕೆ ಸರಿ ಸರಿ" ಎಂದು ಎಷ್ಟೋ ಸಾರೆ ಕೂಗಿ ಹೇಳಿದನು. ಅದಕ್ಕೆ ಆ ಶಿಷ್ಯನು-"ನಾನು ಯಾಕೆ ಸರಿಯಬೇಕು? ನಾನೂ ದೇವರು. ಆನೆಯೂ ದೇವರು. ದೇವರಿಗೆ ಸ್ವಂತ ಅಂಜಿಕೆಯು ಯಾತರದು?" ಎಂದು ಹೇಳಿ ಹಿಂದಕ್ಕೆ ಸರಿದುಕೊಳ್ಳದೆ ಅಲ್ಲಿಯೇ ನಿಂತುಕೊಂಡನು. ಆಗ ಆನೆಯು ಅವನನ್ನು ತನ್ನ ಸೊಂಡೆಯಿಂದ ಹಿಡಿದು ಮೇಲಕ್ಕೆತ್ತಿ ಅವನನ್ನು ನೆಲದ ಮೇಲೆ ಒತ್ತಟ್ಟಿಗೆ ಚಲ್ಲಿಕೊಟ್ಟಿತು. ಇದರಿಂದ ಅವನಿಗೆ ಬಹಳ ಗಾಯವಾಯಿತು. ಆ ಮೇಲೆ ಅವನು ಈ ನಡೆದ ಸಂಗತಿಯನ್ನು ಭಗವಾನರ ಮುಂದೆ ತಿಳಿಸಿದನು ಆಗ ಅವರು-"ನೀನು ದೇವರಿರುವದು ನಿಜವು. ಆನೆಯಾದರೂ ದೇವರಿರುವದು ನಿಜವು. ಆದರೆ ಅದರ ಮೇಲೆ ಕುಳಿತಿದ್ದ ಮಾವುತನಾದರೂ ದೇವರು. ಅಂದಮೇಲೆ ನೀನು ಆ ಎತ್ತರದ ಮೇಲೆ ಕುಳಿತಿದ್ದ ದೇವರು ಹೇಳಿದ ಮಾತನ್ನು ಏಕೆ ಕೇಳಲಿಲ್ಲ?" ಎಂದು ಹೇಳಿದರು.

### ತಾತ್ಪರ್ಯ.

ಬುದ್ಧಿಯ ಮಾತನ್ನು ಅಕ್ಷರಶಃ ಅರ್ಥ ಮಾಡಬಾರದು. ಅದರ ತಾತ್ಪರ್ಯವನ್ನು ಗ್ರಹಿಸಿ ವಿವೇಕದಿಂದಲೂ ಎಚ್ಚರಿಕೆಯಿಂದಲೂ ನಡೆಯತಕ್ಕದ್ದು.

---

# ೨೨. ಬ್ರಹ್ಮಜ್ಞಾನಿಯು.

ಒಂದು ದಿವಸ ಒಬ್ಬ ಬ್ರಹ್ಮಜ್ಞಾನಿಯಾದ ಸಾಧುವು ಭಗವಾನ್ ರಾಮಕೃಷ್ಣ ಪರಮಹಂಸರು ಇರುತ್ತಿದ್ದ ರಾಣಿ ರಾಶಮೋಣಿಯವರ ಕಾಲಿಕಾ ಗು

ಡಿಗೆ ಬಂದನು. ಆ ದಿವಸ ಅವನು ಏನೂ ಉಂಡಿದ್ದಿಲ್ಲ. ಅವನಿಗೆ ಬಹಳ ಹಸಿವೆಯಾಗಿದ್ದರೂ ಅವನು ಯಾರಿಗೂ ಅನ್ನವನ್ನು ಬೇಡಲಿಲ್ಲ. ಆಗ ಒಂದು ನಾಯಿಯು ಆ ಗುಡಿಯ ಮೂಲಿಯೊಳಗೆ ಚಲ್ಲಿಕೊಟ್ಟಿದ್ದ ಅನ್ನವನ್ನು ತಿನ್ನುವದನ್ನು ಅವನು ಕಂಡನು. ಆಗ ಅವನು ಅದರ ಹತ್ತರ ಹೋಗಿ ಅದನ್ನು ಅಪ್ಪಿಕೊಂಡು—"ತಮ್ಮಾ, ನನಗೆ ಪಾಲು ಕೊಡದೆ ನೀನೊಬ್ಬನೇ ತಿನ್ನುವದು ಯೋಗ್ಯವೇ?" ಎಂದು ಹೇಳಿ ಅದರಗೂಡ ತಾನೂ ತಿಂದು, ಆನಂತರ ಅತ್ಯಾನಂದದಿಂದ ಗುಡಿಯೊಳಗೆ ಬಂದು, ಆ ಗುಡಿಯು ತುಂಬ ತನ್ನ ಧ್ವನಿಯು ಕೇಳಿಸುವಂತೆ ಕಾಲಿಕಾದೇವಿಯ ಸ್ತುತಿಸ್ತೋತ್ರಗಳನ್ನು ಹಾಡಿ, ತನ್ನ ಭಕ್ತಿಯನ್ನು ಸಮರ್ಪಿಸಿದನು. ಆ ಮೇಲೆ ಅವನು ಆ ಗುಡಿಯನ್ನು ಬಿಟ್ಟು ಹೋಗುವಾಗ ಭಗವಾನರು ತಮ್ಮೊಬ್ಬ ಶಿಷ್ಯನಿಗೆ—"ಅವನು ಎಲ್ಲಿ ಹೋಗುತ್ತಾನೆ ನೋಡು; ಹಾಗೂ ಅವನು ಏನು ಮಾಡುತ್ತಾನೆಂಬುವದನ್ನು ನನಗೆ ಬಂದು ತಿಳಿಸು" ಎಂದು ಹೇಳಿದರು. ಆ ಪ್ರಕಾರ ಭಗವಾನರ ಶಿಷ್ಯನು ಆ ಸಾಧುವಿನ ಬೆನ್ನ ಹತ್ತಿ ಕೆಲವು ದೂರ ಹೋಗಲಾಗಿ ಅವನು ತಿರುಗಿ ನೋಡಿ—"ಏಕೆ ನನ್ನ ಬೆನ್ನ ಹತ್ತುವೆ?" ಎಂದು ಕೇಳಿದನು. ಅದಕ್ಕೆ ಆ ಶಿಷ್ಯನು ಆ ಸಾಧುವಿಗೆ—"ಸ್ವಾಮಿ, ನನಗೆ ಸ್ವಲ್ಪ ಉಪದೇಶವನ್ನು ಹೇಳಿರಿ" ಎಂದು ಹೇಳಿದನು. ಆಗ ಆ ಸಾಧುವು—"ಯಾವಾಗ ನಿನ್ನ ಕಣ್ಣಿಗೆ ಕಂದಕದೊಳಗಿನ ನೀರು ಮತ್ತು ಪವಿತ್ರವಾದ ಗಂಗಾನದಿಯ ನೀರು ಒಂದೇ ಕಾಣಿಸುತ್ತವೆಯೋ, ಹಾಗೂ ಯಾವಾಗ ನಿನ್ನ ಕಿವಿಗೆ ಮಧುರವಾದ ಕೊಳಲಿನ ನಾದವು ಮತ್ತು ಜನಸಮೂಹದ ಸಪ್ಪಳವು ಒಂದೇ ಕೇಳಿಸುತ್ತವೋ ಆಗ ನಿನಗೆ ಬ್ರಹ್ಮಜ್ಞಾನವು ಬರುವದು" ಎಂದು ಹೇಳಿದನು. ಇದರಂತೆ ಆ ಶಿಷ್ಯನು ಭಗವಾನರ ಕಡೆಗೆ ಬಂದು ತಿಳಿಸಲಾಗಿ ಭಗವಾನರು ಅವನಿಗೆ—"ಆ ಮನುಷ್ಯನಿಗೆ ಬ್ರಹ್ಮಾನಂದವು ಆಗಿದ್ದು ಬ್ರಹ್ಮಜ್ಞಾನವು ಪ್ರಾಪ್ತವಾಗಿರುತ್ತದೆ. ಸಿದ್ಧರು ಒಮ್ಮೊಮ್ಮೆ ಸಣ್ಣ ಮಕ್ಕಳಂತೆಯೂ, ಒಮ್ಮೊಮ್ಮೆ ಹೊಲಸು ಜನರಂತೆಯೂ, ಒಮ್ಮೊಮ್ಮೆ ಹುಚ್ಚರಂತೆಯೂ ಬೇರೆ ಬೇರೆ ವೇಷಗಳಿಂದ ಅಡ್ಡಾಡುತ್ತಾರೆ" ಎಂದು ಹೇಳಿದರು.

## ತಾತ್ಪರ್ಯ.

ಬ್ರಹ್ಮಜ್ಞಾನಿಗಳನ್ನು ಅವರ ಆಚರಣೆಯಿಂದಲೇ ಪರೀಕ್ಷೆ ಮಾಡಿಕೊಳ್ಳ

ತಕ್ಕದ್ದು. ಅವರ ವೇಷಗಳ ಮೇಲಿಂದ ನಂಬಿ ಯಾರೂ ತಪ್ಪು ಗ್ರಹಿಕೆಯನ್ನು ಮಾಡಿಕೊಳ್ಳಬಾರದು.

---

## ೨೩. ಪುತ್ರಶೋಕವು ವ್ಯರ್ಥವಾದದ್ದು.

ಒಬ್ಬಾನೊಬ್ಬ ಬುದ್ಧಿವಂತ ಒಕ್ಕಲಿಗನಿಗೆ ಒಬ್ಬನೇ ಮಗನು ಇದ್ದನು. ಆದುದರಿಂದ ಸ್ವಾಭಾವಿಕವಾಗಿ ಆ ಒಕ್ಕಲಿಗನ ಪ್ರೀತಿಯು ಅವನ ಮೇಲೆ ಬಹಳ ಇತ್ತು. ಒಂದು ದಿವಸ ಅಕಸ್ಮಾತ್ತಾಗಿ ಆ ಹುಡುಗನು ಮಾರಿಕಾ ಬೇನೆಯಿಂದ ಸತ್ತನು. ಆದುದರಿಂದ ಅವನ ಮನೆಯೊಳಗಿನ ಯಾವತ್ತು ಜನರಿಗೆ ಅತಿಶಯ ದುಃಖವಾಗಿ ಅವರು ಅಳಲಿಕ್ಕೆ ಹತ್ತಿದರು. ಆದರೆ ತಂದೆಯು ಮಾತ್ರ ಶಾಂತ ಮನಸ್ಸು ಮಾಡಿ ಕುಳಿತುಕೊಂಡು ಬಿಟ್ಟಿದ್ದನು ಅವನೇನೂ ಅಳಲಿಲ್ಲ. ಇಷ್ಟೇ ಅಲ್ಲ, ಅವನು ತನ್ನ ಮನೆಯ ಜನರಿಗೆ ಅಳಬೇಡಿರೆಂದು ಸಮಾಧಾನ ಮಾಡಲಿಕ್ಕೆ ಹತ್ತಿದನು. ಇದನ್ನು ನೋಡಿ ಅವನ ಹೆಂಡತಿಯು ತನ್ನ ಗಂಡನಿಗೆ ಮಗನು ಸತ್ತ ಬಗ್ಗೆ ಏನೂ ದುಃಖವಾಗಿಲ್ಲವೆಂದು ತಿಳಿದುಕೊಂಡು ತಿರಸ್ಕಾರದಿಂದ–" ನಮ್ಮ ಪ್ರೀತಿಯ ಮಗನು ಸತ್ತದ್ದಕ್ಕಾಗಿ ನಿಮ್ಮ ಕಣ್ಣೊಳಗಿಂದ ಒಂದು ಹನಿ ಸಹ ಕಣ್ಣೀರು ಬರಲೊಲ್ಲದು. ನೀವು ಎಂಥಾ ನಿರ್ದಯರು ಇದ್ದೀರಿ? " ಎಂದು ನುಡಿದಳು ಆಗ ಆ ಒಕ್ಕಲಿಗನು ಶಾಂತ ರೀತಿಯಿಂದ— " ಪ್ರಿಯೇ, ನಿನ್ನೆ ರಾತ್ರಿ ಕನಸಿನಲ್ಲಿ ನಾನು ಅರಸನಾಗಿ ಎಂಟು ಮಂದಿ ಗಂಡು ಮಕ್ಕಳನ್ನು ಹಡೆದದ್ದರಿಂದ ಬಹಳ ಸುಖಿಯಾಗಿದ್ದೆನು. ಈಗ ನಾನು ಆ ಎಂಟು ಮಂದಿ ಮಕ್ಕಳು ಹೋದದ್ದಕ್ಕಾಗಿ ದುಃಖ ಮಾಡಬೇಕೋ, ಈ ನಮ್ಮ ಪ್ರಿಯಕರ ಮಗನು ಹೋದದ್ದಕ್ಕಾಗಿ ದುಃಖಮಾಡಬೇಕೋ ಎಂಬದು ನನಗೆ ತಿಳಿಯಲೊಲ್ಲದು " ಎಂದು ಉತ್ತರ ಕೊಟ್ಟನು. ಇದನ್ನು ಕೇಳಿ ಆ ಒಕ್ಕಲಿಗನ ಹೆಂಡತಿಯು ಏನೂ ಉತ್ತರ ಕೊಡಲಾರದೆ ಸುಮ್ಮನಾದಳು.

### ತಾತ್ಪರ್ಯ.

ಜ್ಞಾನಿಗಳು ಈ ಜಗತ್ತಿನಲ್ಲಿ ನಡೆಯುವ ಸಂಗತಿಗಳು ಕೇವಲ ಸ್ವಪ್ನಮಯವಾಗಿರುತ್ತವೆಂತಲೂ, ಆತ್ಮದ ಹೊರತಾಗಿ ಯಾವದೂ ನಿಜವಲ್ಲವೆಂತಲೂ

ಚೆನ್ನಾಗಿ ತಿಳಿದಿರುವರು. ಆದುದರಿಂದ ಅವರು ಸುಖದುಃಖಗಳು, ಲಾಭಹಾನಿಗಳು, ಜಯಾಪಜಗಳು ಒಂದೇ ಎಂದೂ ತಿಳಿದುಕೊಂಡು ಸಮಾಧಾನದಿಂದ ವರ್ತಿಸುವರು. ಅವರು ಸುಖ ಬಂದಾಗ ಹಿಗ್ಗುವದಿಲ್ಲ; ದುಃಖ ಬಂದಾಗ ತಗ್ಗುವದಿಲ್ಲ.

---

## ೨೪. ಹನುಮಂತದೇವರ ಗುಡಿಸಲವು.

ಒಬ್ಬ ಮನುಷ್ಯನು ಒಂದು ಪರ್ವತದ ತುದಿಯ ಮೇಲೆ ಒಂದು ಗುಡಿಸಲವನ್ನು ಕಟ್ಟಿಸಿದ್ದನು. ಅದನ್ನು ಕಟ್ಟಿಸಲಿಕ್ಕೆ ಅವನಿಗೆ ಬಹಳ ವೆಚ್ಚವೂ ಶ್ರಮವೂ ತಾಗಿದ್ದವು. ಕೆಲವು ದಿವಸಗಳ ನಂತರ ಒಂದು ದೊಡ್ಡ ಬಿರುಗಾಳಿಯು ಬೀಸಿದ್ದರಿಂದ ಆ ಗುಡಿಸಲದೊಳಗೆ ಗಾಳಿಯು ತುಂಬಿಹೋಯಿತು. ಇದರಿಂದ ಆ ಗುಡಿಸಲವು ಈಗ ಬೀಳುತ್ತದೋ ಇನ್ನೊಂದು ಗಳಿಗೆಗೆ ಬೀಳುತ್ತದೋ ಎಂಬುವಂತೆ ಅಲ್ಲಾಡಹತ್ತಿತು. ಆಗ ಆ ಗುಡಿಸಲದ ಒಡೆಯನು ಅದನ್ನು ಉಳಿಸಿಕೊಳ್ಳಬೇಕೆಂದು **ವಾಯುವಿಗೆ**–"ದೇವಾ, ನಿನಗೆ ಕೈಮುಗಿದು ಬೇಡಿಕೊಳ್ಳುತ್ತೇನೆ. ನನ್ನ ಗುಡಿಸಲವನ್ನು ಕೆಡವಬೇಡ" ಎಂದು ಪ್ರಾರ್ಥಿಸಿದನು. ಅದಕ್ಕೆ ವಾಯುದೇವರು ಕೇಳಲಿಲ್ಲ ಅವನು ಎಷ್ಟು ಪ್ರಾರ್ಥಿಸಿದರೂ ಆ ಗುಡಿಸಲವು ಅಗಳಾಡುವದು ನಿಲ್ಲಲಿಲ್ಲ. ಆಗ ಅವನು, ಹನುಮಂತದೇವರು ವಾಯುದೇವರ ಮಗನಿರುವದರಿಂದ ಹನುಮಂತದೇವರದೇ ಗುಡಿಸಲವಿರುತ್ತದೆಂದು ವಾಯುದೇವರಿಗೆ ಬೇಡಿಕೊಂಡರೆ ವಾಯುದೇವರು ತನ್ನ ಮೊರೆಯನ್ನು ಕೇಳದೆ ಇರಲಿಕ್ಕಿಲ್ಲವೆಂದು ವಿಚಾರ ಮಾಡಿ–"ಭಗವಾನ್ ಪವನದೇವಾ! ಇದು ನಿನ್ನ ಮಗನಾದ ಹನುಮಂತದೇವರ ಗುಡಿಸಲವಿರುತ್ತದೆ. ಆದುದರಿಂದ ಅದನ್ನು ಹೇಗಾದರೂ ಕಾಪಾಡು" ಎಂದು ಪುನಃ ಬೇಡಿಕೊಂಡನು. ಆದರೂ ವಾಯುದೇವರು ಕೇಳಲಿಲ್ಲ. ಆ ಮೇಲೆ ಅವನು ಈ ಗುಡಿಸಲವು ಹನುಮಂತದೇವರ ಒಡೆಯನಾದ ಪ್ರಭುರಾಮಚಂದ್ರನದೇ ಇರುತ್ತದೆಂದು ಬೇಡಿಕೊಂಡರೆ ವಾಯುದೇವರಿಗೆ ತನ್ನ ಮೇಲೆ ದಯವು ಬಾರದೆ ಇರಲಿಕ್ಕಿಲ್ಲವೆಂದು ತಿಳಿದು ಅವನು–"ಪ್ರಭೋ, ಈ ಗುಡಿಸಲವು ಭಗವಾನ್ ಶ್ರೀರಾಮಚಂದ್ರನದು ಇರು

ತ್ತದೆ. ಇದನ್ನು ನೀನು ರಕ್ಷಿಸು" ಎಂದು ಬಹಳ ದೀನವಾಣಿಯಿಂದ ಪ್ರಾರ್ಥಿಸಿದನು. ಆದರೂ ವಾಯುದೇವರಿಗೆ ಕರುಣೆಯು ಹುಟ್ಟಲಿಲ್ಲ. ಗುಡಿಸಲವು ಬಹಳ ಹೋಯ್ದಾಡಹತ್ತಲು ಅದು ತನ್ನ ಮೇಲೆ ಕಡಕೊಂಡು ಬೀಳುವದೋ ಏನೋ ಎಂದು ಅವನು ಅಂಜಿಕೊಂಡು ತನ್ನ ಜೀವವನ್ನು ಉಳಿಸಿಕೊಳ್ಳುವದಕ್ಕಾಗಿ ಆ ಗುಡಿಸಲ ಬಿಟ್ಟು ಹೊರಗೆ ಓಡಿಬಂದು-" ಈ ಗುಡಿಸಲವು ಹಾಳಾಗಿ ಹೋಗಲಿ! ಅದರ ಗೊಡವೆಯು ನನಗೇನು?" ಎಂದು ಅದಕ್ಕೆ ಶಪಿಸಹತ್ತಿದನು.

### ತಾತ್ಪರ್ಯ.

ಆರ್ಥಿಕ ಲಾಭದ ಸಲುವಾಗಿ ಅಥವಾ ಐಹಿಕ ಸುಖದ ಸಲುವಾಗಿ ಒಣ ಮಾತುಗಳಿಂದ ವೇಳೆಯನ್ನು ಕಳೆಯದೆ ಪರಮೇಶ್ವರನ ಭಕ್ತಿಯನ್ನು ಮಾಡಿದರೆ ಆತನಿಂದ ನಿಜವಾದ ಕಲ್ಯಾಣವು ಆಗುವದು.

---

## ೨೫. ಒಬ್ಬ ಭಿಕ್ಷುಕನ ಬಳಿಗೆ ಇನ್ನೊಬ್ಬ ಭಿಕ್ಷುಕನು ಹೋದದ್ದು.

ಅಕಬರ ಬಾದಶಹನ ಆಳಿಕೆಯಲ್ಲಿ ದಿಲ್ಲಿಯ ಹತ್ತರ ಇರುವ ಒಂದು ಅಡವಿಯೊಳಗೆ ಒಬ್ಬ ಫಕೀರನು ಒಂದು ಗುಡಿಸಲವನ್ನು ಕಟ್ಟಿಕೊಂಡು ಇರುತ್ತಿದ್ದನು. ಅನೇಕರು ಮೇಲಿಂದ ಮೇಲೆ ಆತನ ದರ್ಶನಕ್ಕಾಗಿ ಬರುತ್ತಿದ್ದರು. ಆದರೆ ತನ್ನ ಕಡೆಗೆ ಬರುವ ಈ ಗೃಹಸ್ಥರಿಗೆ ಆದರಾತಿಥ್ಯವನ್ನು ಮಾಡಲಿಕ್ಕೆ ಅವನ ಹತ್ತರ ಏನೂ ಹಣವು ಇದ್ದಿಲ್ಲ. ಅದುದರಿಂದ ಆ ಫಕೀರನು ಸಾಧುಗಳಿಗೂ ಫಕೀರರಿಗೂ ಅಕಬರ ಬಾದಶಹನು ಉದಾರತನದಿಂದ ಹಣದ ಸಹಾಯವನ್ನು ಮಾಡುತ್ತಾನೆಂಬ ಖ್ಯಾತಿಯನ್ನು ಕೇಳಿ ಆ ಬಾದಶಹನ ಕಡೆಗೆ ಹೋದನು. ಆಗ ಆ ಬಾದಶಹನು ಮಸೂತಿಯೊಳಗೆ ನಮಾಜ ಮಾಡುತ್ತಿದ್ದನು. ಆದುದರಿಂದ ಅವನ ನಮಾಜ ಮುಗಿಯುವತನಕ ಫಕೀರನು ಆ ಸ್ಥಳದ ಹತ್ತರ ಸ್ವಲ್ಪ ಹೊತ್ತು ಕುಳಿತುಕೊಂಡನು. ಆ ಕಾಲಕ್ಕೆ ಅಕಬರನು ತನ್ನ ನಮಾಜದಲ್ಲಿ-

"ಪ್ರಭುವೇ, ನನಗೆ ಹೆಚ್ಚು ಹಣವೂ, ಹೆಚ್ಚು ಅಧಿಕಾರವೂ, ಹೆಚ್ಚು ದೇಶಗಳೂ ಸಿಗುವಂತೆ ಅನುಗ್ರಹಿಸು" ಎಂದು ದೇವರಿಗೆ ಬೇಡಿಕೊಂಡನು. ಇದನ್ನು ಆ ಫಕೀರನು ಕೇಳಿ ಒಮ್ಮಿಂದೊಮ್ಮೆ ಆ ಸ್ಥಳವನ್ನು ಬಿಟ್ಟು ಹೋಗಲಾರಂಭಿಸಿದನು. ಇದನ್ನು ಆ ಬಾದಶಹನು ನೋಡಿ ಅವನಿಗೆ ಪುನಃ ಕುಳಿತುಕೊಳ್ಳಲಿಕ್ಕೆ ಕೈಸನ್ನೆಯನ್ನು ಮಾಡಿದನು. ನವಾಜು ಮುಗಿದ ಬಳಿಕ ಬಾದಶಹನು ಆ ಫಕೀರನಿಗೆ-"ನೀನು ನನ್ನನ್ನು ಕಾಣುವದಕ್ಕಾಗಿ ಬಂದಿದ್ದಿ. ಹೀಗಿದ್ದು ನೀನು ನನ್ನ ಸಂಗಡ ಏನೂ ಮಾತಾಡದೆ ತಿರುಗಿ ನಡೆದಿದ್ದ ಕಾರಣವೇನು?" ಎಂದು ಕೇಳಿದನು. ಆಗ ಫಕೀರನು-"ಬಾದಶಹರೇ, ನಾನು ಬಂದ ಉದ್ದೇಶವನ್ನು ನಿಮ್ಮ ಮುಂದೆ ತಿಳಿಸಿ ನಿಮಗೆ ಸುಮ್ಮನೆ ಯಾಕೆ ಶ್ರಮ ಕೊಡಲಿ?" ಎಂದು ಹೇಳಿದನು. ಆ ನಂತರ ಬಾದಶಹನು ಫಕೀರನಿಗೆ ಬಹಳ ಆಗ್ರಹ ಮಾಡಿದ್ದರಿಂದ ಫಕೀರನು-"ಬಾದಶಹರೇ, ನನ್ನ ಕಡೆಗೆ ಅನೇಕ ಜನರು ಉಪದೇಶವನ್ನು ಕೇಳಲಿಕ್ಕೆ ಬರುತ್ತಾರೆ. ಆದರೆ ನನ್ನ ಬಳಿಯಲ್ಲಿ ಹಣವಿಲ್ಲದ ಮೂಲಕ ಅವರಿಗೆ ಆದರಾತಿಥ್ಯ ಮಾಡುವದು ನನ್ನಿಂದ ಆಗಲೊಲ್ಲದು. ಆದುದರಿಂದ ನಾನು ನಿಮ್ಮ ಬಳಿಗೆ ಸಹಾಯ ಬೇಡಬೇಕೆಂದು ಬಂದೆನು" ಎಂದು ಹೇಳಿದನು. "ಹಾಗಾದರೆ ನೀನು ಇದನ್ನು ನನಗೆ ತಿಳಿಸದೆ ಯಾಕೆ ಹೊರಟು ಹೋಗುತ್ತಿದ್ದಿ?" ಎಂದು ಅಕಬರ ಬಾದಶಹನು ಆ ಫಕೀರನಿಗೆ ಪುನಃ ಕೇಳಲಾಗಿ ಅವನು ಬಾದಶಹನಿಗೆ-"ನೀವು ಸ್ವತಃ ಭಿಕ್ಷುಕರಂತೆ ಪ್ರಭುವಿನ ಹತ್ತರ ಹಣವನ್ನೂ, ಅಧಿಕಾರವನ್ನೂ, ದೇಶಗಳನ್ನೂ ಭಿಕ್ಷೆ ಬೇಡಿಕೊಳ್ಳುವದನ್ನು ನಾನು ನೋಡಿ-"ಯಾರು ಸ್ವತಃ ಭಿಕ್ಷುಕರಿರುತ್ತಾರೋ ಅಂಥವರ ಹತ್ತರ ಭಿಕ್ಷೆ ಬೇಡುವ ಪ್ರಯೋಜನವೇನು? ನನಗೆ ಭಿಕ್ಷೆ ಬೇಡಿಕೊಂಡ ಹೊರತಾಗಿ ನಿರ್ವಾಹವಿಲ್ಲವೆಂದು ಕಂಡುಬಂದರೆ ನಾನು ದೇವರ ಹತ್ತರ ಭಿಕ್ಷೆಯನ್ನು ಬೇಡುವದು ನೆಟ್ಟಗೆಂದು ನನ್ನಷ್ಟಕ್ಕೆ ವಿಚಾರ ಮಾಡಿದೆನು" ಎಂದು ಹೇಳಿದನು.

## ತಾತ್ಪರ್ಯ.

ಜ್ಞಾನಿಗಳು ಜ್ಞಾನವನ್ನು ಕಲಿಸುತ್ತಾರೆಯೇ ಹೊರತು ಪ್ರಪಂಚದ ದುರಾಶೆಯಲ್ಲಿಯೂ ಮೋಹದಲ್ಲಿಯೂ ಬೀಳಲಿಕ್ಕೆ ಎಂದಿಗೂ ಕಲಿಸುವದಿಲ್ಲ. ಅಕಬರನು ದೇವರ ಹತ್ತರ ತನಗೆ ಶಾಶ್ವತ ಸುಖವನ್ನೂ ಮೋಕ್ಷವನ್ನೂ ಕೊಡಲಿ

ಕ್ಕೆ ಕೇಳಿಕೊಳ್ಳುವ ಬದಲಾಗಿ ತನಗೆ ಹೆಚ್ಚು ಹಣವನ್ನೂ ಅಧಿಕಾರವನ್ನೂ ದೇಶಗಳನ್ನೂ ಬೇಡಿಕೊಳ್ಳುವದನ್ನು ಫಕೀರನು ತನ್ನ ಕಿವಿಯಿಂದ ಕೇಳಿ ಅವನನ್ನು ನಾಚಿಸುವದಕ್ಕಾಗಿ ಅಲ್ಲಿಂದ ಎದ್ದು ಹೋದಂತೆ ಮಾಡಿ ಅವನಿಗೆ ಕಡೆಗೆ ಬುದ್ಧಿಯನ್ನು ಕಲಿಸಿದನು.

---

## ೨೬. ಒಬ್ಬ ಸಾಧುವಿನ ಭೂತದಯವು.

ಒಂದು ಹಳ್ಳಿಯೊಳಗೆ ಒಬ್ಬಾನೊಬ್ಬ ಸ್ವಾಮಿಯ ಮಠದಲ್ಲಿ ಇಬ್ಬರು ಸಾಧುಗಳು ಇದ್ದರು. ಅವರು ಪ್ರತಿದಿನ ತಮ್ಮ ಭಿಕ್ಷಾಪಾತ್ರೆಯನ್ನು ತೆಗೆದುಕೊಂಡು ಊರೊಳಗೆ ಭಿಕ್ಷೆಯನ್ನು ಬೇಡಲಿಕ್ಕೆ ಹೋಗುತ್ತಿದ್ದರು. ಅವರಲ್ಲಿ ಒಬ್ಬ ಸಾಧುವು ಒಂದು ದಿವಸ ಒಬ್ಬ ಇನಾಮದಾರನ ಮನೆಯ ಮುಂದೆ ಹಾದು ಹೋಗುವಾಗ ಆ ಇನಾಮದಾರನು ತನ್ನ ಮನೆಯಲ್ಲಿ ಒಬ್ಬ ಬಡವನನ್ನು ಹೊಡೆಯುವದನ್ನು ಕಂಡನು. ಆಗ ಆ ಸಾಧುವು ಆ ಇನಾಮದಾರನ ಮನೆಯೊಳಗೆ ಹೋಗಿ ಅವನಿಗೆ-"ನೀನು ಹೊಡೆಯಬೇಡ" ಎಂದು ಬಹಳ ಅಂಗಲಾಚಿ ಬೇಡಿಕೊಂಡನು. ಆದರೆ ಆ ಇನಾಮದಾರನು ಮತ್ತಿಷ್ಟು ಸಿಟ್ಟಿಗೆದ್ದು ಆ ಸಾಧುವನ್ನು ಮೈಮುರಿ ಹೊಡೆದನು. ಇದರಿಂದ ಆ ಸಾಧುವಿಗೆ ಬಹಳ ಪೆಟ್ಟು ಹತ್ತಲು ಅವನು ಎಚ್ಚರಿಕೆ ತಪ್ಪಿ ನೆಲದ ಮೇಲೆ ಬಿದ್ದುಕೊಂಡನು. ಇದನ್ನು ಒಬ್ಬ ಮನುಷ್ಯನು ಕಣ್ಣಾರೆ ನೋಡಿ ಈ ಸಂಗತಿಯನ್ನು ಮಠಕ್ಕೆ ಹೋಗಿ ತಿಳುಹಿಸಿದನು. ಆಗ ಅವನ ಜೊತೆಗಾರರಾದ ಎರಡನೇ ಸಾಧುಗಳು ಅಲ್ಲಿಗೆ ಬಂದು ಅವನನ್ನು ಮಠಕ್ಕೆ ತೆಗೆದುಕೊಂಡು ಹೋಗಿ ಒಂದು ಕೋಣೆಯಲ್ಲಿ ಹಾಕಿದರು. ಆ ಪೆಟ್ಟು ತಿಂದ ಸಾಧುವು ಬಹಳ ಹೊತ್ತು ಎಚ್ಚರಿಕೆ ತಪ್ಪಿ ಮಲಗಿಕೊಂಡನು. ಆದುದರಿಂದ ಅವನ ಜೊತೆಗಾರರು ದುಃಖದಲ್ಲಿಯೂ ಚಿಂತೆಯಲ್ಲಿಯೂ ಮುಳುಗಿ ಅವನಿಗೆ ಗಾಳಿ ಬೀಸುವುದನ್ನೂ, ಅವನ ಮೋರೆ ತೊಳೆಯುವದನ್ನೂ, ಅವನ ಬಾಯೊಳಗೆ ಹಾಲು ಹಾಕುವದನ್ನೂ ಮಾಡಿದರು. ಇದರಿಂದ ಅವನಿಗೆ ಬಹಳ ಹೊತ್ತಿನ ನಂತರ ಅರ್ಧಮರ್ಧ ಎಚ್ಚ

ರಿಕೆಯು ಬರಲಾಗಿ ಅವನು ಕಣ್ಣು ತೆರೆದು ತನ್ನ ಜೊತೆಗಾರರಾದ ಸಾಧುಗಳ ಕಡೆಗೆ ನೋಡಿದನು. ಆಗ ಅವರಲ್ಲಿ ಒಬ್ಬನು ಅವನು ತಮ್ಮ ಗುರುತು ಹಿಡಿಯುತ್ತಾನೋ ಇಲ್ಲವೋ ಎಂಬುವದನ್ನು ತಿಳಿದುಕೊಳ್ಳುವದಕ್ಕಾಗಿ –"ಸ್ವಾಮಿ, ಈಗ ನಿಮಗೆ ಯಾರು ಹಾಲು ಕುಡಿಸುತ್ತಾರೆಂಬುವದನ್ನು ಗುರುತು ಹಿಡಿಯುತ್ತೀರಾ? ಎಂದು ಕೇಳಿದನು. ಅದಕ್ಕೆ ಆ ಸಾಧುವು ತನ್ನ ನಿರ್ಬಲವಾದ ಧ್ವನಿಯಿಂದ–"ತಮ್ಮಾ, ನನ್ನನ್ನು ಹೊಡೆದವನು ಈಗ ನನಗೆ ಹಾಲು ಹಾಕುತ್ತಿದ್ದಾನೆ" ಎಂದು ಉತ್ತರಕೊಟ್ಟನು.

### ತಾತ್ಪರ್ಯ.

ಪರಮಾತ್ಮನ ಸಾಕ್ಷಾತ್ಕಾರವಾಗಿರುವ ಮನುಷ್ಯನು ತನಗೆ ಕೆಡಕು ಮಾಡಿದವರನ್ನು ಸಹ ತಿರಸ್ಕರಿಸುವದಿಲ್ಲ. ಅವನಿಗೆ ಸುಖದುಃಖಗಳು ಸರಿಯಾಗಿಯೇ ಇರುತ್ತವೆ. ಅವನು ಸದ್ಗುಣಿಗಳ ಮೇಲೂ, ದುರ್ಗುಣಿಗಳ ಮೇಲೂ ದಯವನ್ನು ತೋರಿಸಿ ಅವರ ಮೇಲೆ ಉಪಕಾರವನ್ನು ಮಾಡುತ್ತಾನೆ.

---

## ೨೭. ದೇವರು ಸರ್ವೋತ್ಕೃಷ್ಟ ಬಣ್ಣಗಾರನು.

ಒಬ್ಬ ಬಣ್ಣಗಾರನು ತನ್ನ ಕಡೆಗೆ ಯಾವನಾದರೂ ಗಿರಾಕಿಯು ಬಂದರೆ–"ನಿನ್ನ ಅರಿವೆಗೆ ಯಾವ ಬಣ್ಣವನ್ನು ಎದ್ದಿ ಕೊಡಲಿ?" ಎಂದು ಕೇಳುತ್ತಿದ್ದನು. ಆ ಗಿರಾಕಿಯು–"ಕೆಂಪು" ಎಂದು ಹೇಳಿದರೆ ಆ ಬಣ್ಣಗಾರನು ಅವನ ಅರಿವೆಯನ್ನು ಒಳಗೆ ತೆಗೆದುಕೊಂಡು ಹೋಗಿ ತನ್ನ ದೋಣಿಯೊಳಗೆ ಎದ್ದಿ ಕೊಂಡು ಬಂದು "ಇದು ತಕ್ಕೊಳ್ಳಿರಿ. ನಿಮ್ಮ ಅರಿವೆಗೆ ಕೆಂಪು ಬಣ್ಣ ಎದ್ದಿರುತ್ತೇನೆ" ಎಂದು ಹೇಳಿ ಅದನ್ನು ತಂದುಕೊಡುತ್ತಿದ್ದನು. ಮತ್ತೊಬ್ಬನು "ಹಳದಿ" ಎಂದು ಹೇಳಿದರೆ ಅವನು ಪುನಃ ಒಳಗೆ ಹೋಗಿ ಅವನ ಅರಿವೆಯನ್ನು ಅದೇ ದೋಣಿಯಲ್ಲಿ ಎದ್ದಿ ಹೊರಗೆ ತಂದು–"ಇದು ತಕ್ಕೊಳ್ಳಿರಿ. ನಿಮ್ಮ ಅರಿವೆಗೆ ಹಳದಿ ಬಣ್ಣ ಎದ್ದಿರುತ್ತೇನೆ" ಎಂದು ಹೇಳಿ ಅದನ್ನು ತಂದು ಕೊಡುತ್ತಿದ್ದನು. ಇದೇ ಪ್ರಕಾರ ಅವನ ಬಳಿಗೆ ಯಾವ ಗಿರಾಕಿಗಳು ಬಂದ

ರೂ ಅವನು ಅವರ ಅರಿವೆಗಳಿಗೆ ಅವರ ಇಚ್ಛಾನುಸಾರವಾಗಿ ನೀಲಿ, ಕಿತ್ತಳೆ, ಹಸರು ಮುಂತಾದ ಬೇರೆ ಬೇರೆ ಬಣ್ಣಗಳನ್ನು ಅದೇ ದೋಣಿಯಲ್ಲಿ ಎದ್ದಿ ಅರಿವೆಗಳನ್ನು ತಂದುಕೊಡುತ್ತಿದ್ದನು. ಇದನ್ನೆಲ್ಲ ದೂರದಿಂದಲೇ ನೋಡುತ್ತ ನಿಂತಿದ್ದ ಬೇರೆ ಒಬ್ಬ ಗಿರಾಕಿಯು ಆ ಬಣ್ಣಗಾರನ ಬಳಿಗೆ ಬಂದು– “ಗೆಳೆಯಾ, ನನಗೆ ಇಂಥಾದ್ದೇ ಒಂದು ಬಣ್ಣವು ಸೇರುತ್ತದೆಂದು ಹೇಳಲಾರೆನು. ನಾನು ಬಣ್ಣದ ಪ್ರೀತಿಗಾರನು ಅಲ್ಲ. ನಿನ್ನ ಮನಸ್ಸಿಗೆ ಯಾವ ಬಣ್ಣವು ಸೇರುತ್ತದೋ ಆ ಬಣ್ಣವನ್ನು ನೀನು ನನ್ನ ಅರಿವೆಗೆ ಕೊಡು” ಎಂದು ಹೇಳಿದನು.

### ತಾತ್ಪರ್ಯ.

ದೇವರು ಭಕ್ತರ ಇಚ್ಛಾನುಸಾರವಾಗಿ ಅವರವರಿಗೆ ಸಾಕಾರದಿಂದಲೂ ನಿರಾಕಾರದಿಂದಲೂ ದರ್ಶನ ಕೊಡುತ್ತಾನೆ. ಮೇಲಿನ ಕಥೆಯೊಳಗಿನ ಬಣ್ಣಗಾರನು ಹೇಗೆ ಬೇರೆ ಬೇರೆ ಗಿರಾಕಿಗಳಿಗೆ ಅವರವರ ಅಪೇಕ್ಷೆಯ ಮೇರೆಗೆ ಬಣ್ಣಗಳನ್ನು ಎದ್ದಿಕೊಡುತ್ತಿದ್ದನೋ ಅದರಂತೆ ದೇವರು ಭಕ್ತರ ಬೇರೆ ಬೇರೆ ಸ್ಥಿತಿಗಳಲ್ಲಿ ಅವರವರ ಭಕ್ತಿಯ ಪ್ರಕಾರ ಅವರ ಇಷ್ಟಾರ್ಥಗಳನ್ನು ಪೂರೈಸಿ ಕೊಡುತ್ತಾನೆ. ಇಲ್ಲವೆ ಅವುಗಳನ್ನು ನಿರಾಕರಿಸುತ್ತಾನೆ. ಆತನಿಗೆ ಇಂಥ ಮಾರ್ಗದಿಂದ ಅಥವಾ ಇಂಥ ರೀತಿಯಿಂದ ಭಕ್ತರ ಕಾಮನೆಗಳನ್ನು ತೃಪ್ತಿಬಡಿಸಬೇಕೆಂಬ ನಿರ್ಬಂಧನೆಗಳು ಇರುವದಿಲ್ಲ.

---

## ೨೮. ಒಬ್ಬ ಡಾಂಭಿಕ ಅಕ್ಕಸಾಲಿಗನು.

ಒಬ್ಬ ಅಕ್ಕಸಾಲಿಗನು ಆಭರಣಗಳನ್ನು ಮಾಡುವ ಒಂದು ಅಂಗಡಿಯನ್ನು ಇಟ್ಟಿದ್ದನು. ಅವನು ವಿಷ್ಣುಭಕ್ತನು ಇದ್ದನು. ಅವನು ಕೊರಳಲ್ಲಿ ತುಳಸೀ ಸರವನ್ನು ಹಾಕಿಕೊಂಡು, ಹಣೆಯ ಮೇಲೆ ಅಂಗಾರ ಅಕ್ಷತಿಗಳನ್ನೂ ಭವ್ಯವಾದ ಮುದ್ರೆಗಳನ್ನೂ ಹಚ್ಚಿಕೊಂಡು, ಯಾವಾಗಲು ಕೈಯಲ್ಲಿ ಜಪಮಾಲೆಯನ್ನು ಹಿಡಿದು, ವಿಷ್ಣುಸಹಸ್ರ ನಾಮಾವಳಿಯನ್ನು ಜಪ ಮಾಡುತ್ತಿದ್ದನು. ಅವನ ಅಂಗಡಿಯಲ್ಲಿ ಅವನ ಸಂಗಡ ಕೆಲಸ ಮಾಡಲಿಕ್ಕೆ ನಾಲ್ಕೈದು ಮಂದಿ ಕೆಲಸಗಾರರು ಇದ್ದರು. ಅವರಾದರೂ ದೇವಭಕ್ತರಂತೆ

ಕಾಣಿಸುತ್ತಿದ್ದರು. ಆದುದರಿಂದ ಅವರು ತಮ್ಮನ್ನು ವಂಚಿಸಲಿಕ್ಕಿಲ್ಲವೆಂದು ಯಾವತ್ತು ಗಿರಾಕಿಗಳು ತಿಳಿದುಕೊಂಡು ತಮ್ಮ ಅಭರಣಗಳನ್ನು ಮಾಡಿಸಲಿಕ್ಕೆ ಅವರ ಅಂಗಡಿಗೆ ಹೋಗುತ್ತಿದ್ದರು. ಗಿರಾಕಿಗಳು ಯಾರಾದರೂ ಅವರ ಅಂಗಡಿಗೆ ಬಂದ ಕೂಡಲೆ ಒಬ್ಬ ಕೆಲಸಗಾರನು 'ಕೇಶವ' 'ಕೇಶವ' ಎಂದು ಅನ್ನುತ್ತಿದ್ದನು. ಆ ಮೇಲೆ ಇನ್ನೊಬ್ಬನು 'ಗೋಪಾಳ' 'ಗೋಪಾಳ' ಎಂದು ಅನ್ನುತ್ತಿದ್ದನು. ಕೆಲವು ಹೊತ್ತಿನ ಮೇಲೆ ಮೂರನೇಯವನು 'ಹರಿ' 'ಹರಿ' ಎಂದು ಅನ್ನುತ್ತಿದ್ದನು. ಇಷ್ಟಾದ ಮೇಲೆ ನಾಲ್ಕನೇಯವನು 'ಹರ' 'ಹರ' ಎಂದು ಅನ್ನುತ್ತಿದ್ದನು. ಈ ಪ್ರಕಾರ ಆ ಅಂಗಡಿಯಲ್ಲಿ ಭಗವನ್ನಾಮೋಚ್ಚಾರಣೆಯು ಮೇಲಿಂದ ಮೇಲೆ ಆಗುವದನ್ನು ನೋಡಿ ಜನರು ಆ ಅಕ್ಕಸಾಲಿಗನೂ ಅವನ ಸಂಗಡ ಕೆಲಸ ಮಾಡುವವರೂ ಬಹಳ ಸಾತ್ವಿಕರೆಂದು ಸ್ವಾಭಾವಿಕವಾಗಿ ತಿಳಕೊಂಡಿದ್ದರು. ಆದರೆ ನಿಜಸಂಗತಿಯು ಬಹಳ ಚಮತ್ಕಾರವುಳ್ಳದ್ದಿತ್ತು. ಆ ಅಂಗಡಿಯಲ್ಲಿ ಕೆಲಸ ಮಾಡುವವರು 'ಕೇಶವ' 'ಕೇಶವ' ಎಂದು ನುಡಿದರೆ "ಅಂಗಡಿಗೆ ಬಂದ ಗಿರಾಕಿಯು ಯಾರು ?" ಎಂತಲೂ, 'ಗೋಪಾಳ' 'ಗೋಪಾಳ' ಎಂದು ನುಡಿದರೆ "ನಾನು ಇವನನ್ನು ಪೂರಾ ಅನುಭವ ತೆಗೆದುಕೊಂಡಿದ್ದು ಇವನು ಶುದ್ಧ ಅಕಳದಂಥ ಮನುಷ್ಯನು ಇದ್ದಾನೆ" ಎಂತಲೂ, 'ಹರಿ' 'ಹರಿ' ಎಂದು ನುಡಿದರೆ "ಇಂಥ ಹುಚ್ಚನಿರುವದಾದರೆ ನಾನು ಇವನ ಭಂಗಾರ ಅಥವಾ ಬೆಳ್ಳಿ ಕಳವು ಮಾಡಬಹುದೋ?" ಎಂತಲೂ, 'ಹರ' 'ಹರ' ಎಂದು ನುಡಿದರೆ "ನಿಸ್ಸಂಶಯದಿಂದ ಮಾಡು. ಅವನು ಅಕಳದಂಥ ಮನುಷ್ಯನು ಇದ್ದಾನೆ" ಎಂತಲೂ ತಮ್ಮೊಳಗೆ ಅರ್ಥಗಳನ್ನು ತಿಳಿದುಕೊಳ್ಳುತ್ತಿದ್ದರು.

## ತಾತ್ಪರ್ಯ.

ಹೊಳೆಯುವದೆಲ್ಲ ಚಿನ್ನವಲ್ಲ. ಪರೀಕ್ಷೆ ಮಾಡದೆ ಎಂದೂ ನಂಬಬಾರದು. ಹೊರಗೆ ಭಕ್ತಿಯ ಆಡಂಬರವನ್ನು ಮಾಡುವವರು ಬಹುಶಃ ಕಪಟಿಗಳಿರುವರು. ಆದುದರಿಂದ ಜನರು ಒಮ್ಮೆಲೆ ಬರೀ ಸವಿಮಾತುಗಳ ಮೇಲಿಂದ ಅಥವಾ ಅವರ ಬಟ್ಟೆಗಳ ಮೇಲಿಂದ ಅಥವಾ ಅವರ ಭಸ್ಮ, ರುದ್ರಾಕ್ಷಿ, ಅಂಗಾರ, ಅಕ್ಷತಿಗಳ ಮೇಲಿಂದ ಮೋಸ ಹೋಗಬಾರದು. ಅವರ ಕೆಲಸವನ್ನೂ, ಪೂ

ವೇತಿಹಾಸವನ್ನೂ, ಅವರ ನಡಾವಳಿಯನ್ನೂ ಚನ್ನಾಗಿ ಪರೀಕ್ಷಿಸಿದ ಹೊರತಾಗಿ ಅವರ ಮೇಲೆ ವಿಶ್ವಾಸವಿಡಬಾರದು.

---

## ೨೯. ಶ್ರೀರಾಮ ಪ್ರಭುವಿನ ಇಚ್ಛೆಯು!

ಒಂದು ಹಳ್ಳಿಯಲ್ಲಿ ಒಬ್ಬ ನೇಕಾರನು ಇರುತ್ತಿದ್ದನು. ಅವನು ಮಹಾ ಈಶ್ವರಭಕ್ತನಿದ್ದನು. ಜನರು ಅವನನ್ನು ಯಾವಾಗಲು ಪ್ರೀತಿ ಮಾಡಿ ಅವನಲ್ಲಿ ಬಹಳ ವಿಶ್ವಾಸವಿಡುತ್ತಿದ್ದರು. ಅವನು ತನ್ನ ಮಗ್ಗದ ಮೇಲೆ ನೇಯ್ದ ಅರಿವೆಗಳನ್ನು ಸಂತೆಗೆ ಮಾರಲಿಕ್ಕೆ ಒಯ್ದಾಗ ಜನರು ಅವನಿಗೆ–“ ಇದರ ಬೆಲೆ ಏನು?” ಎಂದು ಕೇಳಿದರೆ ಅವನು–“ ಶ್ರೀರಾಮ ಪ್ರಭುವಿನ ಇಚ್ಛೆಯ ಮೇರೆಗೆ ನೂಲಿನ ಬೆಲೆಯು ಒಂದು ರುಪಾಯಿ ಬಿತ್ತು. ಶ್ರೀರಾಮಪ್ರಭುವಿನ ಇಚ್ಛೆಯ ಮೇರೆಗೆ ಅದರ ಲಾಭವು ಎರಡು ಆಣೆ ಇರುತ್ತದೆ. ಶ್ರೀರಾಮ ಪ್ರಭುವಿನ ಇಚ್ಛೆಯ ಮೇರೆಗೆ ಈ ಅರಿವೆಯ ಬೆಲೆಯು ಈಗ ಸದ್ಯಕ್ಕೆ ಒಂದು ರುಪಾಯಿ ಆರು ಆಣೆ ಇರುತ್ತದೆ” ಎಂದು ಉತ್ತರ ಕೊಡುತ್ತಿದ್ದನು. ಅವನ ಮಾತಿನ ಮೇಲೆ ಜನರ ವಿಶ್ವಾಸವಿದ್ದುದರಿಂದ ಅವರು ಅವನು ಹೇಳಿದ ಬೆಲೆಯನ್ನು ಕೊಟ್ಟು ಅರಿವೆಯನ್ನು ಕೊಳ್ಳುತ್ತಿದ್ದರು. ಅವನು ನಿಜವಾಗಿಯೂ ಈಶ್ವರಭಕ್ತನಿದ್ದು ರಾತ್ರಿಯ ಕಾಲದಲ್ಲಿ ತನ್ನ ಊಟವಾದ ತರುವಾಯ ಬಹಳ ಹೊತ್ತು ಈಶ್ವರ ಭಜನೆಯನ್ನು ಮಾಡುತ್ತಿದ್ದನು.

ಒಂದು ದಿವಸ ರಾತ್ರಿಯು ಬಹಳವಾದರೂ ಅವನಿಗೆ ನಿದ್ರೆಯು ಹತ್ತಲಿಲ್ಲ. ಆದುದರಿಂದ ಅವನು ತಾನು ಮಲಗಲಿಕ್ಕೆ ಹೋಗುವ ಮುಂಚೆ ತನ್ನ ಬಾಗಿಲದ ಬಳಿಯಲ್ಲಿ ಅಂಗಳದೊಳಗೆ ತಂಬಾಕ ಸೇದುತ್ತ ಕುಳಿತುಕೊಂಡಿದ್ದನು. ಆಗ ಕೆಲವು ಕಳ್ಳರು ಅವನ ಮನೆಯ ಮುಂದಿಂದ ಹಾದು ಹೋದರು. ಅವರಿಗೆ ತಮ್ಮ ಕಳವಿನ ಒಡವೆಗಳನ್ನು ತಲೆಯ ಮೇಲೆ ಹೊತ್ತುಕೊಂಡು ಬರುವದಕ್ಕೆ ಒಬ್ಬ ಮನುಷ್ಯನು ಬೇಕಾಗಿದ್ದನು. ಆದುದರಿಂದ ಅವರು ಆ ನೇಕಾರನನ್ನು ನೋಡಿ ಅವನನ್ನು ತಮ್ಮ ಸಂಗಡ ಎಳಕೊಂಡು ಹೋದರು. ಆ ಮೇಲೆ

ಆ ಕಳ್ಳರು ಒಂದು ಮನೆಗೆ ಕನ್ನಾ ತೋಡಿ ಅಲ್ಲಿ ಅನೇಕ ಸಾಮಾನುಗಳನ್ನು ಕಳವು ಮಾಡಿ, ಅವುಗಳಲ್ಲಿ ಕೆಲವನ್ನು ಆ ನೇಕಾರನ ಮೇಲೆ ಹೊರಿಸಿದರು. ಆ ಹೊತ್ತಿಗೆ ಒಬ್ಬ ಪೋಲಿಸ ಸಿಪಾಯಿಯು ಅಲ್ಲಿಗೆ ಬಂದನು. ಆಗ ಎಲ್ಲ ಕಳ್ಳರು ಓಡಿ ಹೋಗಿ ಆ ನೇಕಾರನೊಬ್ಬನು ಮಾತ್ರ ಆ ಸಿಪಾಯಿಯ ಕೈಯಲ್ಲಿ ಸಿಕ್ಕನು. ಆಗ ಆ ಸಿಪಾಯಿಯು ಆ ನೇಕಾರನನ್ನು ಚಾವಡಿಗೆ ಒಯ್ದು ಇಡೀ ರಾತ್ರಿ ಅವನನ್ನು ಅಲ್ಲಿ ಕುಳ್ಳಿರಿಸಿ ಮರುದಿವಸ ಅವನನ್ನು ನ್ಯಾಯಾಧೀಶನ ಮುಂದೆ ಒಯ್ದನು. ಈ ವರ್ತಮಾನವನ್ನು ಊರೊಳಗಿನ ಜನರು ಕೇಳಿ ಅವನನ್ನು ನೋಡಲಿಕ್ಕೆ ಹೋಗಿ ನ್ಯಾಯಾಧೀಶನಿಗೆ–"ದೊರೆಗಳೇ, ಈ ಮನುಷ್ಯನು ಕಳವು ಮಾಡತಕ್ಕವನಲ್ಲ. ಇವನು ಎಂದೂ ಏನೂ ಕಳವು ಮಾಡಿಲ್ಲ" ಎಂದು ಹೇಳಿದರು. ಆಗ ನ್ಯಾಯಾಧೀಶನು ಆ ನೇಕಾರನಿಗೆ–"ಏನೇನಾಯಿತೆಂಬುವದನ್ನು ನಿಜವಾಗಿ ಹೇಳು" ಎಂದು ಕೇಳಿದನು. ಅದಕ್ಕೆ ಆ ನೇಕಾರನು–" ಸ್ವಾಮೀ, ನಾನು ಶ್ರೀರಾಮ ಪ್ರಭುವಿನ ಇಚ್ಛೆಯ ಮೇರೆಗೆ ನಿನ್ನೆ ರಾತ್ರಿ ನನ್ನ ಮನೆಯ ಅಂಗಳದಲ್ಲಿ ಕುಳಿತಿದ್ದೆನು. ಆಗ ಶ್ರೀರಾಮ ಪ್ರಭುವಿನ ಇಚ್ಛೆಯ ಮೇರೆಗೆ ಬಹಳ ರಾತ್ರಿಯು ಆಗಿತ್ತು. ನಾನು ಶ್ರೀರಾಮ ಪ್ರಭುವಿನ ಇಚ್ಛೆಯ ಮೇರೆಗೆ ಆತನ ಭಜನೆಯನ್ನು ಮಾಡಿ ಆತನ ನಾಮಸಂಕೀರ್ತನ ಮಾಡುವಲ್ಲಿ ತೊಡಗಿದ್ದೆನು. ಆ ಸಮಯದಲ್ಲಿ ಶ್ರೀರಾಮ ಪ್ರಭುವಿನ ಇಚ್ಛೆಯ ಮೇರೆಗೆ ಕಳ್ಳರು ಅಲ್ಲಿಗೆ ಬಂದರು. ಅವರು ನನ್ನನ್ನು ನೋಡಿ ಶ್ರೀರಾಮ ಪ್ರಭುವಿನ ಇಚ್ಛೆಯ ಮೇರೆಗೆ ನನ್ನನ್ನು ತಮ್ಮ ಸಂಗಡ ಬಲಾತ್ಕಾರದಿಂದ ಜಗ್ಗಿಕೊಂಡು ಹೋಗಿ ಒಂದು ಮನೆಗೆ ಕನ್ನಾ ತೋಡಿದರು. ಅವರು ಅಲ್ಲಿ ಕಳವು ಮಾಡಿ ತಂದದ್ದನ್ನು ಮೊಟ್ಟೆ ಕಟ್ಟಿ ಶ್ರೀರಾಮ ಪ್ರಭುವಿನ ಇಚ್ಛೆಯ ಮೇರೆಗೆ ನನ್ನ ತಲೆಯ ಮೇಲೆ ಹೊರಿಸಿದರು. ಆಗ ಅಲ್ಲಿಗೆ ಶ್ರೀರಾಮ ಪ್ರಭುವಿನ ಇಚ್ಛೆಯ ಮೇರೆಗೆ ಒಬ್ಬ ಪೋಲಿಸ ಸಿಪಾಯಿಯು ಬಂದು ನನ್ನನ್ನು ಹಿಡಕೊಂಡು ಹೋಗಿ ಆ ರಾತ್ರಿಯಲ್ಲಿ ಜ್ಞಾನಮಂಟಪದೊಳಗೆ ಕುಳ್ಳಿರಿಸಿದನು. ಮರುದಿವಸ ಅಂದರೆ ಈಹೊತ್ತು ಮುಂಜಾನೆ ಅವನು ಶ್ರೀರಾಮ ಪ್ರಭುವಿನ ಇಚ್ಛೆಯ ಮೇರೆಗೆ ನನ್ನನ್ನು ನಿಮ್ಮ ಮುಂದೆ ತಂದು ನಿಲ್ಲಿಸಿರುತ್ತಾನೆ" ಈ ಪ್ರಕಾರ ಆ ನೇಕಾರನು ಹೇಳಿದ್ದನ್ನೆಲ್ಲ ನ್ಯಾಯಾಧೀಶನು ಸಂಪೂರ್ಣವಾಗಿ ಕೇಳಿಕೊಂಡು, ಆವನ ಈಶ್ವರ ಭಕ್ತಿಯನ್ನೂ

ನಿರುಪದ್ರವವನ್ನೂ ಮನವರಿಕೆ ಮಾಡಿಕೊಂಡು, ಅವನನ್ನು ಬಿಡುಗಡೆ ಮಾಡಿದನು. ಆಗ ಅವನು ಹೊರಗೆ ಬಂದು ತನ್ನ ಗೆಳೆಯರ ಮುಂದೆ--"ಶ್ರೀರಾಮ ಪ್ರಭುವಿನ ಇಚ್ಛೆಯು ಮೇರೆಗೆ ನಾನು ಬಿಡುಗಡೆಯಾಗಿ ಬಂದೆನು" ಎಂದು ಹೇಳಿದನು.

## ತಾತ್ಪರ್ಯ.

ಎಲ್ಲವು ಭಗವಂತನ ಇಚ್ಛೆಯ ಮೇಲೆ ಅವಲಂಬಿಸಿರುತ್ತದೆ. ನಾವು ಸಂಸಾರದಲ್ಲಿರಲಿ ಅಥವಾ ಅದನ್ನು ತ್ಯಾಗ ಮಾಡಲಿ, ಆತನ ಮೇಲೆ ಯಾವತ್ತು ಭಾರವನ್ನು ಹಾಕಿ ನಮ್ಮ ಕರ್ತವ್ಯವನ್ನು ಚನ್ನಾಗಿ ಮಾಡಿದರೆ ಅವನು ನಮ್ಮನ್ನು ಯಾವಾಗಲು ರಕ್ಷಣ ಮಾಡುತ್ತಾನೆ. ನಮ್ಮ ಈ ಕಥಾನಾಯಕನಾದ ನೇಕಾರನು ಪ್ರತಿಯೊಂದು ವಾಕ್ಯವನ್ನು ಮಾತಾಡುವಾಗ "ಶ್ರೀರಾಮ ಪ್ರಭುವಿನ ಇಚ್ಛೆ" ಎಂದು ನುಡಿಯುತ್ತಿದ್ದ ಸಂಗತಿಯು ಅವನ ಭಾವಿಕತನವನ್ನೂ ಲೌಕಿಕ ನಡತೆಗಳ ಅಜ್ಞಾನವನ್ನೂ ತೋರಿಸಿ ಅವನನ್ನು ಹಾಸ್ಯಕ್ಕೆ ಈಡು ಮಾಡುತ್ತದೆ. ಆದರೂ ಅವನು ಬಹಿರಂಗದಂತೆಯೇ ಅಂತರಂಗದಲ್ಲಿ ಶುದ್ಧನಾಗಿದ್ದ ಕಾರಣ ಅವನನ್ನು ಪರಮೇಶ್ವರನು ರಕ್ಷಣ ಮಾಡಿದನು. ಆದರೆ ಪರಮೇಶ್ವರನಲ್ಲಿ ಭಕ್ತಿಯನ್ನು ಮಾಡುತ್ತಿದ್ದಾಗ್ಯೂ ಹೊರಗೆ ಅದರ ಅಟ್ಟಹಾಸವನ್ನು ಮಾಡದೆ ತಮ್ಮ ಶುದ್ಧ ನಡಾವಳಿಯನ್ನು ಇಟ್ಟುಕೊಳ್ಳುವದು ಯಾವಾಗಲು ಉತ್ತಮವಾದ ಮಾರ್ಗವು.

---

# ೩೦. ಏಕಾಗ್ರಚಿತ್ತವು.

ಒಬ್ಬ ಗೃಹಸ್ಥನು ದಿನಾಲು ರಾತ್ರಿ ತನ್ನ ವೇಶ್ಯೆಯ ಮನೆಗೆ ನಿಯಮಿತ ವೇಳೆಗೆ ಹೋಗುತ್ತಿದ್ದನು. ಒಂದು ದಿವಸ ಅವನು ತನ್ನ ತಂದೆಯ ಶ್ರಾದ್ಧವಿದ್ದುದರಿಂದ ಮನೆಯಲ್ಲಿ ಬಹಳಹೊತ್ತು ಇರಬೇಕಾಯಿತು. ಅದುದರಿಂಧ ಅವನು ಬಹಳ ರಾತ್ರಿಯಾದ ನಂತರ ತನ್ನ ಮನೆಯಲ್ಲಿ ಮಾಡಿದ ಪಕ್ವಾನ್ನವನ್ನು ಬಡಿಸಿದ ಒಂದು ತಾಟವನ್ನು ತನ್ನ ಕೈಯಲ್ಲಿ ಮುಚ್ಚಿಕೊಂಡು ಹೋಗಲಿಕ್ಕೆ ಹತ್ತಿದ್ದನು. ಆಗ ಅವನ ಮನಸ್ಸು ತನ್ನ ಪ್ರಿಯಪಾತ್ರಳಲ್ಲಿ ಸಂಪೂರ್ಣ

ವಾಗಿ ಮಗ್ನವಾಗಿದ್ದ ಕಾರಣ ಅವನಿಗೆ ತಾನು ದಾರಿಯಲ್ಲಿ ಏನು ತುಳಿಯುತ್ತೇನೆಂಬುವ ಅಥವಾ ತಾನು ಯಾವ ಹಾದಿಯಿಂದ ಹೋಗುತ್ತೇನೆಂಬುವ ಎಚ್ಚರವು ಸಹ ಇದ್ದಿಲ್ಲ. ಅವನು ಹೋಗುವಾಗ ದಾರಿಯಲ್ಲಿ ಒಬ್ಬ ಯೋಗಿಯು ಕಣ್ಣು ಮುಚ್ಚಿಕೊಂಡು ಭಗವಂತನ ಜಪವನ್ನು ಮಾಡುತ್ತ ಕುಳಿತಿದ್ದನು. ಆಗ ಈ ವಿಷಯಾಂಧ ಮನುಷ್ಯನ ಕಾಲು ಆ ಯೋಗಿಗೆ ತಾಕಿತು. ಆ ಕೂಡಲೆ ಆ ಯೋಗಿಯು ಸಿಟ್ಟಿಗೆದ್ದು ಅವನಿಗೆ-“ ಏನಿದು ? ನಿನ್ನ ಕಣ್ಣು ಹೋದವೇ ? ನಾನು ಭಗವಂತನ ಜಪವನ್ನು ಮಾಡುತ್ತಿರುವಾಗ ನೀನು ನನ್ನನ್ನು ತುಳಿದಿಯಾ ? ” ಎಂದು ಕೇಳಿದನು. ಆಗ ಆ ಗೃಹಸ್ಥನು ಆ ಯೋಗಿಗೆ-“ ಕ್ಷಮೆ ಇರಲಿ. ಆದರೆ ನಿಮಗೆ ಒಂದು ಪ್ರಶ್ನೆಯನ್ನು ಕೇಳುತ್ತೇನೆ. ಅದಕ್ಕೆ ಉತ್ತರ ಕೊಡಿರಿ. ನನ್ನ ವೇಶ್ಯೆಯ ಮನೆಗೆ ಹೋಗಬೇಕೆಂಬ ವಿಚಾರದಲ್ಲಿ ನನ್ನ ಮನಸ್ಸು ಮಗ್ನವಾಗಿದ್ದ ಕಾರಣ ನನಗೆ ದಾರಿಯಲ್ಲಿ ಎರಡನೇ ಯಾವ ಮನುಷ್ಯನಾಗಲೀ ವಸ್ತುವಾಗಲೀ ಕಾಣಿಸಲಿಲ್ಲ. ಆದರೆ ನೀವು ಭಗವಂತನ ಧ್ಯಾನದಲ್ಲಿ ಮಗ್ನರಾಗಿದ್ದರೂ ನಿಮಗೆ ಹೊರಗಿನ ಜನರ ಎಚ್ಚರಿಕೆಯು ಪೂರ್ಣವಾಗಿತ್ತು. ಅಂದಮೇಲೆ ನೀವು ಮಾಡುತ್ತಿದ್ದ ಭಗವಂತನ ಧ್ಯಾನವು ಎಂಥದು ?” ಎಂದು ಕೇಳಿದನು. ಈ ಪ್ರಶ್ನೆಯನ್ನು ಕೇಳಿ ಯೋಗಿಯು ನಾಚಿಕೊಂಡನು. ಮುಂದೆ ಇದೇ ವಿಷಯಾಂಧನು ತನ್ನ ಕೆಟ್ಟ ನಡತೆಯನ್ನು ಬಿಟ್ಟುಕೊಟ್ಟು ಪರಮೇಶ್ವರನ ಶೋಧ ಮಾಡುವದಕ್ಕಾಗಿ ಸಂಸಾರವನ್ನು ತ್ಯಾಗ ಮಾಡಿದನು. ಅವನು ತನ್ನ ಸಂಸಾರ ತ್ಯಾಗ ಮಾಡುವ ಕಾಲಕ್ಕೆ ತನ್ನ ವೇಶ್ಯೆಯ ಮನೆಗೆ ಹೋಗಿ – “ ತಾಯೀ, ನೀನು ನನ್ನ ಗುರುವು ಇರುತ್ತೀ. ನಿನ್ನಿಂದಲೇ ನನಗೆ ದೇವರಲ್ಲಿ ಲೀನವಾಗುವ ಬುದ್ಧಿಯು ಉತ್ಪನ್ನವಾಯಿತು ” ಎಂದು ಹೇಳಿದನು.

## ತಾತ್ಪರ್ಯ.

ಮನುಷ್ಯನಿಗೆ ಏಕಾಗ್ರಚಿತ್ತವು ಬಹಳ ಮಹತ್ವವುಳ್ಳದ್ದಿರುವದು. ಏಕಾಗ್ರಚಿತ್ತವಿರುವವನಿಗೆ ಪ್ರತಿಯೊಂದು ಕೆಲಸವು ಸುಲಭವಾಗುವದು. ಅವನ ಮನಸ್ಸು ಒಮ್ಮೆ ಪರಮೇಶ್ವರನಲ್ಲಿ ಲೀನವಾಯಿತೆಂದರೆ ಅವನಿಗೆ ತನ್ನ ಸ್ವಂತ ಹೃದಯದಲ್ಲಿಯೇ ಪರಮೇಶ್ವರನು ಕಾಣಿಸುತ್ತಾನೆ.

# ೩೧ ಮೂರು ಮಂದಿ ಕಳ್ಳರು.

ಒಬ್ಬ ದಾರಿಕಾರನು ಒಂದು ಅಡವಿಯೊಳಗಿಂದ ಹಾದು ಹೋಗುತ್ತಿದ್ದನು. ಆಗ ಅವನಿಗೆ ದಾರಿಯಲ್ಲಿ ಮೂರು ಮಂದಿ ಕಳ್ಳರು ಗಂಟುಬಿದ್ದು ಅವನ ಹತ್ತರ ಇದ್ದುದನ್ನೆಲ್ಲ ಕಸದುಕೊಂಡರು. ಆ ಮೇಲೆ ಒಬ್ಬ ಕಳ್ಳನು—“ ಇವನನ್ನು ಜೀವಂತ ಇಡುವದರಿಂದ ಉಪಯೋಗವೇನು? ” ಎಂದು ಹೇಳಿ ಅವನನ್ನು ತನ್ನ ಕೈಯೊಳಗಿನ ಕತ್ತಿಯಿಂದ ಕೊಲ್ಲಲಿಕ್ಕೆ ಹೋದನು. ಇದನ್ನು ಕಂಡು ಎರಡನೇ ಕಳ್ಳನು—“ಇವನನ್ನು ಕೊಲ್ಲುವದರಿಂದ ನಮಗೆ ಆಗುವ ಲಾಭವೇನು? ಇವನನ್ನು ಕೈಕಾಲು ಕಟ್ಟಿ ಒಂದುಕಡೆಗೆ ಒಗೆದು ಬಿಡೋಣ ” ಎಂದು ಹೇಳಿದನು. ಈ ಪ್ರಕಾರ ಇಬ್ಬರು ಕಳ್ಳರು ಅವನ ಕೈಕಾಲು ಕಟ್ಟಿ ಅವನನ್ನು ದಾರೀ ಬಿಡಿಸಿ ದೂರ ಒಕ್ಕೊಟ್ಟು ಸ್ವಲ್ಪ ಮುಂದಕ್ಕೆ ಹೋದ ತರುವಾಯ ಮೂರನೇ ಕಳ್ಳನು ಹಿಂತಿರುಗಿ ಬಂದು— “ ಅಯ್ಯೋ ! ನಿನಗೆ ನೋವು ಆಗಿರುವದಲ್ಲವೇ? ಬಾ. ನಿನಗೆ ಕಟ್ಟಿದ ಹಗ್ಗವನ್ನು ನಾನು ಬಿಚ್ಚಿಬಿಡುತ್ತೇನೆ ” ಎಂದು ಹೇಳಿ ಅವನ ಹಗ್ಗವನ್ನು ಬಿಚ್ಚಿದನು. ಹಾಗೂ ಅವನಿಗೆ-- “ ನನ್ನ ಸಂಗಡ ಬಾ. ನಿನಗೆ ನಿನ್ನ ಮನೆಯ ದಾರಿಯನ್ನು ತೋರಿಸುತ್ತೇನೆ ” ಎಂದು ಹೇಳಿ ಅವನನ್ನು ಕರೆದುಕೊಂಡು ಹೋದನು. ಮುಂದೆ ಅವರಿಬ್ಬರೂ ಬಹಳದೂರ ದಾರೀ ನಡೆದಮೇಲೆ ಆ ಮೂರನೇ ಕಳ್ಳನು ದಾರಿಕಾರನಿಗೆ- “ ಇತ್ತ ನೋಡು. ಇಲ್ಲಿಂದ ನಿನ್ನ ಮನೆಯು ಕಾಣಿಸುತ್ತದ. ಈ ದಾರಿಯಿಂದ ನೆಟ್ಟಗೆ ಹೋಗು. ಅಂದರೆ ನೀನು ಬೇಗನೆ ನಿನ್ನ ಮನೆಗೆ ಹೋಗಿ ಮುಟ್ಟುವಿ ” ಎಂದು ಹೇಳಿದನು. ಆಗ ದಾರಿಕಾರನು ಮೂರನೇ ಕಳ್ಳನಿಗೆ ಕೃತಜ್ಞತೆಯಿಂದ—— “ ನನ್ನಮೇಲೆ ನಿನ್ನ ಉಪಕಾರವು ಬಹಳವಾಯಿತು. ನೀನು ನನ್ನ ಮನೆಗೆ ಬಂದು ನನ್ನ ಆತಿಥ್ಯವನ್ನು ಸ್ವೀಕರಿಸಿಕೊಂಡು ಹೋಗು” ಎಂದು ಅಂದನು. ಅದಕ್ಕೆ ಆ ಕಳ್ಳನು - “ ಗೆಳೆಯಾ, ನಾನು ನಿನ್ನ ಮನೆಗೆ ಬರಲಾರೆನು. ನಾನು ಅಲ್ಲಿಗೆ ಬಂದರೆ ನನ್ನನ್ನು ಪೋಲಿಸರು ಹಿಡಿಯುತ್ತಾರೆ ” ಎಂದು ಉತ್ತರ ಕೊಟ್ಟು ಹೊರಟು ಹೋದನು.

## ತಾತ್ಪರ್ಯ.

ಈ ಜಗತ್ತು ದೊಡ್ಡ ಅರಣ್ಯದಂತೆ ಇರುತ್ತದೆ. ಸತ್ವ, ರಜಸ್ಸು ಮತ್ತು ತಮಸ್ಸು ಈ ಮೂರು ಗುಣಗಳು ಈ ಕಥೆಯೊಳಗಿನ ಮೂರು ಮಂದಿ ಕಳ್ಳರಂತೆ

ಇರುತ್ತವೆ. ಜೀವವು ಅಥವಾ ಆತ್ಮವು ದಾರಿಕಾರನಂತೆ ಇರುತ್ತದೆ. ಆತ್ಮಜ್ಞಾನವು ಅವನ ನಿಧಿಯು. ತಮಸ್ಸು ಜೀವವನ್ನು ನಾಶಪಡಿಸಲಿಕ್ಕೆ ಯತ್ನಿಸುತ್ತದೆ. ರಜಸ್ಸು ಅವನನ್ನು ಸಂಸಾರದ ಮೋಹಪಾಶಗಳಿಂದ ಬಿಗಿಯುತ್ತದೆ. ಆದರೆ ಸತ್ವವು ಅವನನ್ನು ರಜಸ್ಸಿನ ಮತ್ತು ತಮಸ್ಸಿನ ಕ್ರಿಯೆಗಳಿಂದ ಬಿಡುಗಡೆ ಮಾಡುತ್ತದೆ. ಆಗ ಜೀವವು ಸತ್ವ ಗುಣದ ಆಧಾರದಿಂದ ಕಾಮ, ಕ್ರೋಧ, ಲೋಭ, ಮೋಹವೆಂಬ ತಮಸ್ಸಿನ ಬಾಧೆಯಿಂದ ತಪ್ಪಿ ಹೋಗುತ್ತದೆ. ಆ ಬಳಿಕ ಸತ್ವವು ಜೀವವನ್ನು ಸಂಸಾರದ ಬಂಧನೆಗಳಿಂದ ಮುಕ್ತ ಮಾಡುತ್ತದೆ. ಸತ್ವವು ಈ ಕಥೆಯೊಳಗಿನ ಮೂರನೇ ಕಳ್ಳನಂತೆ ಇರುತ್ತದೆ. ಬರೀ ಸತ್ವದಿಂದ ಪರಮೇಶ್ವರನ ಜ್ಞಾನವು ಪ್ರಾಪ್ತವಾಗಲಾರದು. ಅದು ಮನುಷ್ಯನ ಜೀವಕ್ಕೆ ಅಥವಾ ಆತ್ಮಕ್ಕೆ– "ಇಗೋ! ಅಲ್ಲಿ ಪರಮೇಶ್ವರನ ಮನೆಯು ಇರುತ್ತದೆ!" ಎಂದು ದಾರಿಯನ್ನು ತೋರಿಸಿ ಅದೃಶ್ಯವಾಗುತ್ತದೆ. ಸತ್ವವಾದರೂ ಪರಮೇಶ್ವರನ ಮನೆಯು ಸಮೀಪಕ್ಕೆ ಬರಲಾರದು.

---

## ೩೨. ಒಬ್ಬ ಸಿದ್ಧ ಪುರುಷನ ಪಶ್ಚಾತ್ತಾಪವು.

ಒಂದಾನೊಂದು ಊರೊಳಗೆ ಒಬ್ಬ ಒಳ್ಳೇ ಸ್ವಭಾವದ ದೊಡ್ಡ ಯೋಗಿಯು ಇರುತ್ತಿದ್ದನು. ಅವನಿಗೆ ತನ್ನ ಯೋಗಸಾಮರ್ಥ್ಯದ ಬಗ್ಗೆ ಬಹಳ ಅಭಿಮಾನವಿತ್ತು. ಒಂದು ದಿವಸ ಪರಮೇಶ್ವರನು ಒಬ್ಬ ಸಣ್ಣ ಬೈರಾಗಿಯ ವೇಷದಿಂದ ಅವನ ಬಳಿಗೆ ಬಂದು-– "ಪೂಜ್ಯನೇ, ನಿನ್ನಲ್ಲಿ ಬಹಳ ಅದ್ಭುತವಾದ ಯೋಗಸಾಮರ್ಥ್ಯವುಂಟೆಂದು ನಾನು ಕೇಳುತ್ತೇನೆ" ಎಂದು ನುಡಿದನು. ಅವನನ್ನು ನೋಡಿ ಆ ಸಜ್ಜನನು ಅವನಿಗೆ ಬಹಳ ಆದರಮಾಡಿ ಅವನಿಗೆ ಕುಳಿತುಕೊಳ್ಳಲಿಕ್ಕೆ ಯೋಗ್ಯ ಸ್ಥಳವನ್ನು ಕೊಟ್ಟನು. ಆ ಸಮಯದಲ್ಲಿ ಆ ದಾರಿಯಿಂದ ಒಂದು ಆನೆಯು ಹಾದು ಹೋಗಲಿಕ್ಕೆ ಹತ್ತಿತ್ತು. ಅದನ್ನು ನೋಡಿ ಬೈರಾಗಿಯು ಆ ಸಾಧುವಿಗೆ–"ಮಹಾತ್ಮನೇ, ನಿನ್ನ ಮನಸ್ಸಿಗೆ ಬಂದರೆ ನಿನಗೆ ಈ ಆನೆಯನ್ನು ಕೊಲ್ಲಲಿಕ್ಕೆ ಆಗುವದೇ?" ಎಂದು ಕೇಳಿದನು. ಅದಕ್ಕೆ ಆ ಯೋಗಿಯು–-"ಹೌದು. ಅದೇನೂ ದೊಡ್ಡ ಕೆಲಸವಲ್ಲ" ಎಂದು ಹೇಳಿ ಒಂದು

ಹಿಡಿ ಮಣ್ಣನ್ನು ತೆಗೆದುಕೊಂಡು ಅದನ್ನು ಮಂತ್ರಿಸಿ ಆ ಆನೆಯ ಮೇಲೆ ಒ ಕ್ಕೊಟ್ಟನು. ಕೂಡಲೆ ಆ ಆನೆಯು ದೊಡ್ಡ ಧ್ವನಿಯಿಂದ ಕೂಗಿ, ಸಂಕಟಪಡು ತ್ತ, ನೆಲದ ಮೇಲೆ ಬಿದ್ದು ಸತ್ತಿತು. ಇದನ್ನು ನೋಡಿದವನೇ ಆ ಬೈರಾಗಿಯು– “ ಅಹಹ ! ನಿನ್ನಲ್ಲಿ ಎಂಥ ಅದ್ಭುತ ಶಕ್ತಿಯುಂಟು ! ನೀನು ಇಂಥ ದೊಡ್ಡ ಪ್ರಾಣಿಯನ್ನು ಒಂದು ಕ್ಷಣದಲ್ಲಿ ಕೊಂದು ಬಿಟ್ಟೆ ! ” ಎಂದು ಅವನ ಸ್ತುತಿ ಮಾಡಿ– “ ನಿನಗೆ ಇದನ್ನು ತಿರುಗಿ ಜೀವಂತ ಮಾಡಲಿಕ್ಕೂ ಬರುತ್ತಿರಬಹು ದು ” ಎಂದು ನುಡಿದನು. ಆಗ ಆ ಸಿದ್ಧ ಪುರುಷನು– “ ಹೌದು. ಅದಾದರೂ ಬರುತ್ತದೆ ” ಎಂದು ಹೇಳಿ ತಿರುಗಿ ಒಂದು ಹಿಡಿ ಮಣ್ಣನ್ನು ತೆಗೆದುಕೊಂಡು ಅದನ್ನು ಮಂತ್ರಿಸಿ ಅಲ್ಲಿ ಸತ್ತು ಬಿದ್ದಿದ್ದ ಆನೆಯ ಮೇಲೆ ಒಗೆದನು. ಅದರಿಂದ ಆ ಆನೆಯು ಜೀವಂತವಾಗಿ ಮೇಲಕ್ಕೆ ಎದ್ದು ಹೊರಟು ಹೋಯಿತು. ಆಗ ಬೈ ರಾಗಿಯು ತಿರುಗಿ ಆ ಸಿದ್ಧ ಪುರುಷನಿಗೆ– “ ಅಹಹ ! ನಿನ್ನಲ್ಲಿ ಎಷ್ಟು ಅದ್ಭುತ ಸಾಮರ್ಥ್ಯವು ಇರುತ್ತದೆ ! ಆದರೆ ನೀನು ಈ ಆನೆಯನ್ನು ಮೊದಲಿಗೆ ಕೊಂದು ಹಿಂದುಗಡೆ ಬದುಕಿಸಿದಿ. ಇದರಿಂದ ನಿನಗೇನು ಲಾಭವಾಯಿತು ? ನಿನಗೆ ಪರ ಮಾತ್ಮನ ಸಾಕ್ಷಾತ್ಕಾರವಾಯಿತೋ?” ಎಂದು ಕೇಳಿ ಅಲ್ಲಿಂದ ಹೊರಟು ಹೋ ದನು. ಆಗಿನಿಂದ ಸಿದ್ಧ ಪುರುಷನು ಜ್ಞಾನ ಮಾರ್ಗದ ಕಡೆಗೆ ಹೆಚ್ಚು ಲಕ್ಷ್ಯವನ್ನು ಕೊಡಹತ್ತಿದನು.

## ತಾತ್ಪರ್ಯ.

ಬರೀ ಮಂತ್ರ, ಸಿದ್ಧಿ, ಯೋಗ ಇವುಗಳ ಹಂಬಲವನ್ನು ಇಟ್ಟುಕೊಂಡು ತಮ್ಮ ಅದ್ಭುತಶಕ್ತಿಯ ಬಗ್ಗೆ ಕೀರ್ತಿಯನ್ನು ದೊರಕಿಸುವವರಿಗೆ ಪರಮೇಶ್ವರನ ಸಾಕ್ಷಾತ್ಕಾರವಾಗುವದಿಲ್ಲ. ಯಾವ ಮನುಷ್ಯನು ಯಾವ ಉದ್ದೇಶದಿಂದ ಮಂತ್ರಸಿದ್ಧಿಯನ್ನೂ, ಸಾಧನವನ್ನೂ, ಯೋಗವನ್ನು ಮಾಡುತ್ತಾನೆಂಬುದನ್ನು ಪರಮೇಶ್ವರನು ಪರೀಕ್ಷಿಸುತ್ತಾನೆ. ಅವನು ಬಾಹ್ಯಾತ್ಕಾರಿಕ ಸೊಬಗಿಗೆ ಎಂದೂ ಮೋಹಿಸುವದಿಲ್ಲ.

---

# ೩೩. ಪುನರ್ಜನ್ಮವು.

ಮನುಷ್ಯನು ಅಜ್ಞಾನ ಸ್ಥಿತಿಯಲ್ಲಿ ಉಳಿಯುವ ತನಕ ಪುನರ್ಜನ್ಮ ವನ್ನು ಹೊಂದುತ್ತಾನೆ. ಅವನಿಗೆ ಪರಮೇಶ್ವರನ ಜ್ಞಾನವು ಪ್ರಾಪ್ತಿಯಾಗಿ

ಪರಮೇಶ್ವರನ ಸಾಕ್ಷಾತ್ಕಾರವಾದ ಬಳಿಕ ಪುನರ್ಜನ್ಮವು ತಪ್ಪುವದು. ಆ ಮೇಲೆ ಅವನಿಗೆ ಭೂಲೋಕದಲ್ಲಿ ತಿರುಗಿ ಬರುವ ಕಾರಣವು ಉಳಿಯುವದಿಲ್ಲ. ಅಥವಾ ಎರಡನೇ ಯಾವ ಕಡೆಗೂ ಸಂಚರಿಸುವ ಕಾರಣವು ಇರುವದಿಲ್ಲ. ಕುಂಬಾರನು ತಾನು ಮಾಡಿದ ಗಡಿಗೆಮಡಿಕೆಗಳನ್ನು ಬಿಸಿಲೊಳಗೆ ಒಣಹಾಕುವಾಗ ಕೆಲವು ಸುಟ್ಟಿದ್ದವುಗಳನ್ನು ಮತ್ತು ಕೆಲವು ಸುಡದೆ ಇದ್ದವುಗಳನ್ನು ಕೂಡಿ ಇಡುವದುಂಟು. ಅವುಗಳನ್ನು ದನಗಳು ತುಳಿದು ಒಡೆದರೆ ಅವನು ಸುಟ್ಟ ಮಡಿಕೆಗಳನ್ನು ಮಾತ್ರ ಅವು ತನ್ನ ಕೆಲಸಕ್ಕೆ ಉಪಯೋಗ ಬೀಳುವದಿಲ್ಲೆಂದು ಚಲ್ಲಿ ಕೊಟ್ಟು ಸುಡದೆ ಇದ್ದ ಮಡಿಕೆಗಳ (ಹಸಿ ಮಡಿಕೆಗಳ) ನ್ನು ತಿರುಗಿ ಅರಲು ಮಾಡಿ, ಆ ಅರಲನ್ನು ಕೊಳೆ ಹಾಕಿ, ಜಿಗಿಮಾಡಿ, ಅದರಿಂದ ಹೊಸ ಮಡಿಕೆಗಳನ್ನು ಮಾಡುತ್ತಾನೆ.

### ತಾತ್ಪರ್ಯ.

ಪರಮೇಶ್ವರನ ಸಾಕ್ಷಾತ್ಕಾರವು ಆಗದೆ ಇರುವ ಮನುಷ್ಯನು ತಿರುತಿರುಗಿ ಈ ಜನ್ಮದಲ್ಲಿ ಬರುವದಕ್ಕಾಗಿ ಕುಂಬಾರನಾದ ಬ್ರಹ್ಮದೇವನ ಕೈಗೆ ಹೋಗಬೇಕಾಗುತ್ತದೆ. ಕುದಿಸಿದ ಭತ್ತವನ್ನು ಬಿತ್ತುವದರಿಂದ ಮೊಳಕೆಯು ನಾಟುವದಿಲ್ಲಾದ ಕಾರಣ ಅದನ್ನು ಬಿತ್ತುವದು ನಿರರ್ಥಕವಿರುತ್ತದೆ. ಇದರಂತೆ ಪರಮೇಶ್ವರನ ಜ್ಞಾನವೆಂಬ ಅಗ್ನಿಯ ಸ್ಪರ್ಶವನ್ನು ಹೊಂದಿದ ಮನುಷ್ಯನು ಹೊಸ ಸೃಷ್ಟಿಗೆ ಏನೂ ಉಪಯೋಗ ಬೀಳುವದಿಲ್ಲ.

---

## ೩೪. ತ್ಯಾಗವೇ ಶಾಂತಿಯು.

ಒಂದು ಸಾರೆ ಒಂದು ಹಾಳೇಹದ್ದು ತನ್ನ ಚುಂಚುಪುಟದಲ್ಲಿ ಒಂದು ಮೀನವನ್ನು ಕಚ್ಚಿಕೊಂಡು ಆಕಾಶ ಮಾರ್ಗವಾಗಿ ಹೋಗುತ್ತಿರುವಾಗ ಅದರ ಬೆನ್ನ ಹಿಂದೆ ಅನೇಕ ಕಾಗೆಗಳು ಕಾವ್ ಕಾವ್ ಎಂದು ಬಹಳ ಸಪ್ಪಳವಾಗುವಂತೆ ಕೂಗುತ್ತಲೂ ಅದನ್ನು ಭಯಂಕರವಾಗಿ ಅಂಜಿಸುತ್ತಲೂ ನಡೆದಿದ್ದವು. ಅದು ತನ್ನ ಬಾಯೊಳಗಿನ ಭಕ್ಷ್ಯ ಸಹಿತವಾಗಿ ತಪ್ಪಿಸಿಕೊಂಡು ಹೋಗಬೇಕೆಂದು ಬಹಳ ಪ್ರಯತ್ನವನ್ನು ಮಾಡಿತು. ಅದು ಒಮ್ಮೊಮ್ಮೆ ಬಹಳ ಮೇಲಕ್ಕೆ ಹಾರಿ

ಹೋಗಿ ಅಕಸ್ಮಾತ್ ಕೆಳಗೆ ಇಳಿದು ಬರುತ್ತಿತ್ತು. ಒಮ್ಮೊಮ್ಮೆ ಒಂದು ದಿಕ್ಕಿನಲ್ಲಿ ಹಾರಾಡುತ್ತ, ಇನ್ನೊಮ್ಮೆ ಇನ್ನೊಂದು ದಿಕ್ಕಿನಲ್ಲಿ ಹಾರಾಡುತ್ತ, ನಾಲ್ಕೂಕಡೆಗೆ ಹಾರಾಡಿತು. ಏನು ಮಾಡಿದರೂ ಆ ಹದ್ದಿಗೆ ಆ ಕಾಗೆಗಳ ಕಾಟವು ತಪ್ಪಲಿಲ್ಲ. ಆಗ ಅದು ಬೇಸತ್ತು ಸಂತಾಪಪಟ್ಟು ತನ್ನ ಬಾಯೊಳಗಿನ ಮಾಂಸವನ್ನು ಕೆಳಗೆ ಚಲ್ಲಿಕೊಟ್ಟಿತು. ಆಗ ಇನ್ನೊಂದು ಹದ್ದು ಅದನ್ನು ತನ್ನ ಬಾಯೊಳಗೆ ಕಚ್ಚಿಕೊಂಡಿತು. ಇದನ್ನು ನೋಡಿ ಆ ಕಾಗೆಗಳು ಆ ಎರಡನೇ ಹದ್ದನ್ನು ಬೆನ್ನ ಹತ್ತಿದವು. ಆ ಮೇಲೆ ಇಷ್ಟೊತ್ತಿನ ತನಕ ಆಕಾಶದಲ್ಲಿ ಹಾರಾಡಿ ದಣಿದಂಥ ಮೊದಲನೇ ಹದ್ದು ವಿಶ್ರಾಂತಿಗಾಗಿ ಗಿಡದ ಮೇಲೆ ಬಂದು ಕುಳಿತಿತು. ಇದನ್ನು ಒಬ್ಬ ಅವಧೂತನು ಕಂಡು ಆ ಹದ್ದಿಗೆ ನಮಸ್ಕಾರ ಮಾಡಿ– "ಅಹಹ, ಹದ್ದೇ! ನೀನು ನನ್ನ ಗುರುವು ಇರುತ್ತೀ. ಮನುಷ್ಯನು ತನ್ನ ಐಹಿಕ ವಾಸನೆಗಳನ್ನು ಬಿಟ್ಟು ಬಿಡುವ ತನಕ ಅವನಿಗೆ ಜನರ ಕಾಟವು ತಪ್ಪುವದಿಲ್ಲ ಮತ್ತು ಅವನಿಗೆ ಆತ್ಮಶಾಂತಿಯು ದೊರಕುವದಿಲ್ಲ ಎಂಬ ಉಪದೇಶವನ್ನು ನಾನು ಇವತ್ತಿನ ದಿವಸ ನಿನ್ನಿಂದ ಕಲಿತುಕೊಂಡೆನು" ಎಂದು ನುಡಿದನು.

### ತಾತ್ಪರ್ಯ.

ಮನುಷ್ಯನು ಆಶೆಯಿಂದ ಕುದಿಯುವ ತನಕ ಅವನಿಗೆ ಶಾಂತಿಯು ದೊರಕುವದಿಲ್ಲ. ಆದ್ದರಿಂದ ಯಾರೂ ಅತ್ಯಾಶೆಯನ್ನು ಮಾಡಿ ಸಂಕಟಕ್ಕೆ ಗುರಿಯಾಗಬಾರದು. ತೃಪ್ತಿಯು ಸುಖವನ್ನೂ ಸಮಾಧಾನವನ್ನೂ ಕೊಡುವದು. ಆದರೆ ಪ್ರಯತ್ನ ಮಾಡದೆ ಮೈಗಳ್ಳತನದಿಂದ ಸುಮ್ಮನೆ ಕುಳಿತುಕೊಳ್ಳುವದು ತೃಪ್ತಿಯೆಂದೆನಿಸಿಕೊಳ್ಳಲಾರದು. ತನ್ನ ಯೋಗ್ಯತೆಗೂ ಶಕ್ತಿಗೂ ಸಾಧ್ಯವಾದುದನ್ನು ಈ ಪ್ರಪಂಚದಲ್ಲಿ ಮಾಡಬೇಕಾಗುತ್ತದೆ. ಆದರೆ ಅದು ಸಾಧ್ಯವಾದ ಬಳಿಕ ಅತ್ಯಾಶೆಗೆ ಹೋಗಬಾರದು.

---

## ೩೫. ಕನಕ ಮತ್ತು ಕಾಂತಾ.

ಈ ಜಗತ್ತಿನಲ್ಲಿ ಕನಕ ಮತ್ತು ಕಾಂತಾ ಇವುಗಳು ನಮಗೆ ಪ್ರಬಲವಾದ ಶತ್ರುಗಳಿರುತ್ತವೆ. ಇವುಗಳು ನಮ್ಮನ್ನು ಒಮ್ಮೆ ತಮ್ಮ ಮೋಹಪಾಶಗ

ಳಿಂದ ಬಿಗಿದವೆಂದರೆ ನಮ್ಮ ಸ್ವತಂತ್ರತೆಯೂ, ನಿಸ್ಪೃಹತೆಯೂ, ಸ್ವಾಭಿಮಾನವೂ ಹೊರಟುಹೋಗುತ್ತವೆ. ಕಾಂತೆಯ ಸಲುವಾಗಿ ಕನಕದ ಅಗತ್ಯವು ಹೆಚ್ಚಾಗುವದು. ಅವಳು ನಾವು ಏನು ಮಾಡಬೇಕೆಂಬದರ ಪರಿಮಿತಿಯನ್ನು ಉಳಿಸುವದಿಲ್ಲ. ಅವಳು ನಮ್ಮನ್ನು ಪರವಶತೆಗೂ ದುಃಖಕ್ಕೂ ಈಡು ಮಾಡುವಳು.

ಮೊದಲಿಗೆ ಜಯಪುರದ ಗೋವಿಂದಜಿ ಎಂಬ ಗುಡಿಯ ಪೂಜಾರರು ಬ್ರಹ್ಮಚಾರಿಗಳಾಗಿರುತ್ತಿದ್ದರು. ಆದುದರಿಂದ ಅವರು ಬಹಳ ಈಶ್ವರಭಕ್ತರೂ ಸ್ವಾಭಿಮಾನಿಗಳೂ ಇದ್ದರು. ಅವರನ್ನು ಅವರ ಒಡೆಯನಾದ ಜಯಪುರದ ಅರಸನು ಕರೆಸಿದರೂ ಅವರು ಅವನಿಗೆ-“ನಮ್ಮ ಕೂಡ ಏನಾದರೂ ಕೆಲಸವಿದ್ದರೆ ನೀವೇ ಇಲ್ಲಿಗೆ ಬನ್ನಿರಿ” ಎಂದು ಹೇಳಿ ಕಳುಹಿಸುತ್ತಿದ್ದರು. ಮುಂದೆ ಕೆಲವು ದಿವಸಗಳ ನಂತರ ಅರಸನು ಅವರ ಮದುವೆಯನ್ನು ಮಾಡಿದನು. ಆಗಿನಿಂದ ಅವರು ತಮಗೆ ಅರಸನು ಕರೆಯಿಸದೆ ಇದ್ದರೂ ಅವನ ಕಡೆಗೆ ಹೋಗಹತ್ತಿದರು. ಒಬ್ಬ ಪೂಜಾರಿಯು ಅರಸನಿಗೆ ಆಶೀರ್ವಾದವನ್ನು ಕೊಡುವದಕ್ಕಾಗಿ, ಇನ್ನೊಬ್ಬನು ದೇವರ ಮೂರ್ತಿಯನ್ನು ಕುಳ್ಳಿರಿಸಿದ ಜಗಲಿಯ ಮೇಲಿನ ಹೂವುಗಳನ್ನು ಕೊಡುವದಕ್ಕಾಗಿ, ಮೂರನೇಯವನು ದೇವರ ನೈವೇದ್ಯವನ್ನು ಮುಟ್ಟಿಸುವದಕ್ಕಾಗಿ ಈ ಪ್ರಕಾರ ಬೇರೆ ಬೇರೆ ಕೆಲಸಗಳಿಗಾಗಿ ಹೋಗಲಿಕ್ಕೆ ಹತ್ತಿದರು. ಇದನ್ನೆಲ್ಲ ಇವರು ತಮ್ಮ ಸಂಸಾರದ ಸಲುವಾಗಿ ಮಾಡಬೇಕಾಯಿತು. ಒಬ್ಬನು ತನ್ನ ಮನೆಯನ್ನು ಕಟ್ಟುವ ಸಲುವಾಗಿ, ಇನ್ನೊಬ್ಬನು ತನ್ನ ಮಗನ ಮುಂಜಿ ಮದುವೆಯ ಸಲುವಾಗಿ, ಮೂರನೇಯವನು ತನ್ನ ಹೆಂಡತಿಯ ಸೀರೆ ಕುಪ್ಪಸಗಳ ಸಲುವಾಗಿ ಈ ಪ್ರಕಾರ ಒಂದಿಲ್ಲೊಂದು ಕಾರಣದ ಸಲುವಾಗಿ ಅರಸನ ಬಳಿಯಲ್ಲಿ ಹಣವನ್ನು ಕೇಳಲಿಕ್ಕೆ ಹೋಗುವ ಪ್ರಸಂಗಗಳು ಬರಹತ್ತಿದವು. ಪರವಶತೆಯು ಯಾವಾಗಲು ಕೆಡಕಿರುತ್ತದೆ. !

## ತಾತ್ಪರ್ಯ.

ಜನರು ಎರಡನೆಯವರ ಕೈಕೆಳಗೆ ಕೆಲಸ ಮಾಡುವಾಗ ಕೆಲಕೆಲವು ಸಾರೆ ಬೇರೆ ಬೇರೆ ತರದ ಅವಮಾನಗಳನ್ನೂ ಕಷ್ಟಗಳನ್ನೂ ತಡೆದುಕೊಳ್ಳಬೇಕಾಗುತ್ತದೆ. ಇದರ ಕಾರಣವೇನು? ದ್ರವ್ಯಲೋಭವು. ಹಾಗೂ ಈ ದ್ರವ್ಯ

ಲೋಭವು ಸ್ತ್ರೀಯರ ಸಲುವಾಗಿಯೇ ಹೆಚ್ಚಾಗುತ್ತದೆ. ಕನಕ ಮತ್ತು ಕಾಂತಾ ಇವುಗಳೆರಡನ್ನೂ ಬಿಟ್ಟು ಇರುವವರು ಬಹಳ ವಿರಳ. ಅವರೇ ಸಾಧು ಸಜ್ಜನರು! ಅವರೇ ಪರಮೇಶ್ವರನ ಪರಮ ಪ್ರಿಯ ಭಕ್ತರು!

---

## ೩೬. ಶ್ರೀಮಂತಿಕೆಯ ಗರ್ವವು.

ಶ್ರೀಮಂತಿಕೆಯು ಬಂದ ಕೂಡಲೆ ಯಾರೂ ಗರ್ವವನ್ನು ಮಾಡಬಾರದು. ಶ್ರೀಮಂತಿಕೆಯಲ್ಲಿ ಗರ್ವವು ಬರುವಂಥ ವಿಶೇಷ ಕಾರಣವೇನೂ ಇರುವದಿಲ್ಲ. ನಾವು ಶ್ರೀಮಂತರೆಂದು ತಿಳಿದುಕೊಂಡರೆ ನಮ್ಮಕಿಂತ ಎಷ್ಟೋ ಪಾಲು ಹೆಚ್ಚಿನ ಶ್ರೀಮಂತರು ಅನೇಕರು ಇರುವರು. ಅವರ ಮುಂದೆ ನಾವು ಕೇವಲ ಭಿಕ್ಷುಕರಂತೆ ತೋರುವೆವು. ರಾತ್ರಿಯಲ್ಲಿ ಕತ್ತಲಗವಿದ ಕೂಡಲೆ ಹೊನ್ನೆಹುಳಗಳು ಬಂದು-"ನಾವು ಇಡೀ ಜಗತ್ತಿಗೆ ಬೆಳಕನ್ನು ಕೊಡುತ್ತೇವೆ" ಎಂದು ತಿಳಿದುಕೊಳ್ಳುವವು. ಆದರೆ ಆಕಾಶದಲ್ಲಿ ನಕ್ಷತ್ರಗಳು ಮೂಡಿದ ನಂತರ ಅವುಗಳ ಸೊಕ್ಕು ಹೊರಟು ಹೋಗುವದು. ಆಗ ನಕ್ಷತ್ರಗಳು-"ನಾವು ಇಡೀ ಜಗತ್ತಿಗೆ ಬೆಳಕನ್ನು ಕೊಡುತ್ತೇವೆ" ಎಂದು ತಿಳಿದುಕೊಳ್ಳುವವು. ಕೆಲವು ಹೊತ್ತಿನ ಮೇಲೆ ಚಂದ್ರನು ಆಕಾಶದಲ್ಲಿ ಉದಯವಾಗಲು ನಕ್ಷತ್ರಗಳು ಕಳೆಗುಂದಿ ತಮ್ಮ ಮೋರೆಯನ್ನು ಬಾಡಿಸಿಕೊಂಡು ಕುಳಿತುಕೊಳ್ಳುವವು. ಆ ಮೇಲೆ ಚಂದ್ರನು ತನ್ನ ಬೆಳಕಿನಿಂದಲೇ ಜಗತ್ತು ಬೆಳಗಿ ಸೌಂದರ್ಯದಿಂದ ಮೆರೆಯುವದೆಂದು ತಿಳಿದು ಸೊಕ್ಕಿಗೆ ಬರುವನು. ಆದರೆ ಮರುದಿವಸ ಮುಂಜಾನೆ ಪೂರ್ವದಿಕ್ಕಿನಲ್ಲಿ ಸೂರ್ಯನಾರಾಯಣನ ಆಗಮನವನ್ನು ಸಾರುವಂಥ ಪ್ರಭಾತಕಾಲವು ಪ್ರಾಪ್ತವಾಗಲು ಚಂದ್ರನ ಸೊಕ್ಕು ಎಲ್ಲಿ ಉಳಿಯುವದು? ಅದುದರಿಂದ ತಾವು ಶ್ರೀಮಂತರೆಂದು ತಿಳಿದುಕೊಳ್ಳುವವರು ಈ ಎಲ್ಲ ಸಂಗತಿಗಳನ್ನು ಕುರಿತು ವಿಚಾರ ಮಾಡಿದರೆ ಅವರಿಗೆ ತಮ್ಮ ಶ್ರೀಮಂತಿಕೆಯನ್ನು ಕುರಿತು ಸೊಕ್ಕು ಮಾಡುವ ಕಾರಣವು ಉಳಿಯಲಾರದು.

### ತಾತ್ಪರ್ಯ.

ಈ ಜಗತ್ತಿನಲ್ಲಿ ಒಬ್ಬರಿಗಿಂತ ಇನ್ನೊಬ್ಬರು ಹೆಚ್ಚು ಶ್ರೀಮಂತರು ಅಥ

ವಾ ಹೆಚ್ಚಿನ ಯೋಗ್ಯತೆಯುವರು ಇರುತ್ತಾರೆ. ಆದುದರಿಂದ ಯಾರೂ ತಮ್ಮ ಶ್ರೀಮಂತಿಕೆ, ವಿದ್ಯೆ, ಅಧಿಕಾರ, ಸೌಂದರ್ಯ, ಶಕ್ತಿ ಮುಂತಾದವುಗಳ ಬಗ್ಗೆ ಗರ್ವ ಮಾಡಬಾರದು. ಪರಮೇಶ್ವರನೊಬ್ಬನೇ ಮಾತ್ರ ಎಲ್ಲರಿಗಿಂತ ಹೆಚ್ಚು ಶ್ರೀಮಂತನೂ ಶ್ರೇಷ್ಠನೂ ಇರುತ್ತಾನೆ.

---

## ೩೭. ದ್ರವ್ಯದ ತಿರಸ್ಕಾರವು.

ಒಂದು ದಿವಸ ಒಬ್ಬ ಮಾರವಾಡಿ ಸದ್ಗೃಹಸ್ಥನು ಭಗವಾನ್ ರಾಮಕೃಷ್ಣ ಪರಮಹಂಸರ ಕಡೆಗೆ ಬಂದು-"ನಿಮಗೆ ಬೇಕಾಗುವ ವೆಚ್ಚವನ್ನು ಮಾಡುವದಕ್ಕೆ ನಿಮಗೆ ಕೆಲವು ಸಾವಿರ ರೂಪಾಯಿಗಳನ್ನು ಕಾಣಿಕೆಯಾಗಿ ಕೊಡುತ್ತೇನೆ. ಹಾಗೆ ಮಾಡುವದಕ್ಕೆ ನೀವು ನನಗೆ ದಯಮಾಡಿ ಅಪ್ಪಣೆಯನ್ನು ಕೊಡಿರಿ" ಎಂದು ಬೇಡಿಕೊಂಡನು. ಆ ಮಾರವಾಡಿ ಸದ್ಗೃಹಸ್ಥನ ಉದ್ದೇಶವು ಸ್ತುತ್ಯವಿದ್ದರೂ ಭಗವಾನರು "ಬೇಡ" ಎಂದು ನಿಷ್ಠುರವಾಗಿ ಉತ್ತರ ಕೊಟ್ಟರು. ಅವರು ಆ ಮಾರವಾಡಿಗೆ-"ನನಗೆ ನಿನ್ನ ಹಣವನ್ನು ತೆಗೆದುಕೊಂಡು ಏನೂ ಮಾಡತಕ್ಕದ್ದಿರುವದಿಲ್ಲ. ಯಾಕೆಂದರೆ ನಾನು ಒಮ್ಮೆ ನಿನ್ನ ಹಣವನ್ನು ತೆಗೆದುಕೊಂಡರೆ ನನ್ನ ಮನಸ್ಸು ಯಾವಾಗಲು ಅದರ ಮೇಲೆಯೇ ಕುಳಿತುಕೊಳ್ಳುವದು" ಎಂದು ಹೇಳಿದರು. ಇದನ್ನು ಕೇಳಿ ಆ ಮಾರವಾಡಿ ಸದ್ಗೃಹಸ್ಥನು-"ಹಾಗಾದರೆ ಆ ಹಣವನ್ನು ನಿಮ್ಮ ಉಪಯೋಗದ ಸಲುವಾಗಿ ನಿಮ್ಮ ಯಾರಾದರೂ ಆಪ್ತರ ಹೆಸರಿನಿಂದ ಒಂದು ಕಡೆಗೆ ಬಡ್ಡಿಯಿಂದ ಇಡುತ್ತೇನೆ" ಎಂದು ಹೇಳಿದನು. ಇದಕ್ಕೆ ಭಗವಾನರು-"ಛೇ. ಹಾಗೆ ಮಾಡಿದರೆ ಮೋಸ ಮಾಡಿದಂತೆ ಆಗುವದು. ಮೇಲಾಗಿ ನನ್ನ ಹಣವು ಇಂಥವರ ಹತ್ತರ ಇಟ್ಟಿರುತ್ತದೆಂದು ಯಾವಾಗಲು ನನ್ನ ಮನಸ್ಸಿನಲ್ಲಿ ವಿಚಾರವು ಬರುವದು. ಆದುದರಿಂದ ಅದು ನನಗೆ ಬೇಕಾಗಿಲ್ಲ" ಎಂದು ಉತ್ತರ ಕೊಟ್ಟರು. ಆದರೂ ಆ ಮಾರವಾಡಿ ಸದ್ಗೃಹಸ್ಥನು ಪುನಃ ಭಗವಾನರಿಗೆ-"ಮನಸ್ಸು ಎಣ್ಣೆಯಂತೆ ಇದ್ದರೆ ಅದು ಕನಕ ಮತ್ತು ಕಾಂತಾ ಎಂಬ ಸಮುದ್ರದ ಮೇಲೆ ಸಹ ತೇಲಾಡುವದು" ಎಂದು ಭಗವಾನರ ಬೋಧಾಮೃತದೊಳಗಿನ ಒಂದು ಉಪದೇಶಪರ

ವಾಕ್ಯವನ್ನು ಹೇಳಿದನು. ಅದಕ್ಕೆ ಭಗವಾನರು-"ಅದೆಲ್ಲ ನಿಜವು. ಆದರೆ ಸಾಸಿವೆ ಎಣ್ಣೆಯು ಬಹಳ ದಿವಸಗಳ ತನಕ ನೀರಿನ ಮೇಲೆ ತೇಲಾಡಿದರೆ ಅದು ಕೊಳೆಯುವದು. ಆದುದರಿಂದ ಮನಸ್ಸು ಕನಕ ಮತ್ತು ಕಾಂತಾ ಎಂಬ ಸಮುದ್ರದ ಮೇಲೆ ತೇಲಾಡಿದರೂ ಬಹಳ ದಿವಸಗಳ ತನಕ ಅದರ ಸಂಸರ್ಗವು ಆಗುವದರಿಂದ ಅದು ನಿಶ್ಚಯವಾಗಿ ಭಷ್ಟವಾಗಿ ದುಷ್ಟ ವಾಸನೆಯನ್ನು ಪಸರಿಸುವದು" ಎಂದು ಉತ್ತರಕೊಟ್ಟರು.

### ತಾತ್ಪರ್ಯ.

ದ್ರವ್ಯಲೋಭವನ್ನು ಬಿಟ್ಟವರು ದ್ರವ್ಯದ ಹೆಸರೇ ತೆಗೆಯುವದಿಲ್ಲ. ದ್ರವ್ಯವನ್ನು ತಮ್ಮಿಂದ ಯಾವಾಗಲೂ ದೂರ ಇಡುವರು. ಅದನ್ನು ಕೈಮುಟ್ಟುವದಿಲ್ಲ ಅಥವಾ ಕಣ್ಣಿನಿಂದ ಸಹ ನೋಡುವದಿಲ್ಲ. ಹಾಗೂ ಅದರ ಬಗ್ಗೆ ಒಂದು ಕ್ಷಣವಾದರೂ ತಮ್ಮ ಮನಸ್ಸಿನಲ್ಲಿ ವಿಚಾರ ಮಾಡುವದಿಲ್ಲ.

---

## ೩೮. ದುಷ್ಟ ವಾಸನೆಗಳನ್ನು ಜಯಿಸುವ ಬಗೆಯು.

ಭಗವಾನ್ ರಾಮಕೃಷ್ಣ ಪರಮಹಂಸರ ಒಬ್ಬ ಶಿಷ್ಯನು ಭಗವಾನರ ಮುಂದೆ ಒಂದು ದಿವಸ ಬಂದು-"ನಾನು ನನ್ನ ಆಯುಷ್ಯವನ್ನು ಭಗವದ್ಧ್ಯಾನದಲ್ಲಿ ಕಳೆಯುತ್ತಿದ್ದರೂ ನನ್ನ ಮನಸ್ಸಿನಲ್ಲಿ ಆಗಾಗ ದುಷ್ಟವಾಸನೆಗಳು ಬರುತ್ತವೆ. ಆದುದರಿಂದ ಅವುಗಳನ್ನು ಹೇಗೆ ಗೆದೆಯಬೇಕು?" ಎಂದು ಪ್ರಶ್ನೆಮಾಡಿದನು. ಅದಕ್ಕೆ ಭಗವಾನರು ಅವನ ಮುಂದೆ ಕೆಳಗೆ ಬರೆದ ಪ್ರಕಾರ ಒಂದು ಕಥೆಯನ್ನು ಹೇಳಿದರು. ಅದೇನಂದರೆ:—

ಒಬ್ಬ ಮನುಷ್ಯನ ಹತ್ತರ ಒಂದು ಪ್ರೀತಿಯ ನಾಯಿಯು ಇತ್ತು. ಅದನ್ನು ಅವನು ಯಾವಾಲು ಪ್ರೀತಿಸುತ್ತಲೂ, ಬಗಗಲೊಳಗೆ ಎತ್ತಿಕೊಂಡು ಅಡ್ಡಾಡುತ್ತಲೂ, ಅದರ ಸಂಗಡ ಆಡುತ್ತ ಮುದ್ದು ಕೊಡುತ್ತಲೂ ಇದ್ದನು. ಈ ಅವನ ಹುಚ್ಚುತನವನ್ನು ನೋಡಿ ಒಬ್ಬ ಬುದ್ಧಿವಂತ ಮನುಷ್ಯನು ಅವ

ನಿಗೆ-“ನೀನು ಈ ಪ್ರಕಾರ ನಾಯಿಯ ಕೂಡ ಬಹಳ ಸಲಿಗೆಯನ್ನು ಮಾಡ ಬೇಡ. ಅದು ಹೇಳಿ ಕೇಳಿ ಬುದ್ಧಿ ಇಲ್ಲದ ಪಶು ಇರುತ್ತದೆ. ಆದುದರಿಂದ ಅದು ನಿನಗೆ ಒಂದಿಲ್ಲೊಂದು ದಿನ ಕಡಿದೀತು” ಎಂದು ಹೇಳಿದನು. ಈ ಉಪದೇಶ ವನ್ನು ಕೇಳಿ ನಾಯಿಯ ಒಡೆಯನು ಅದು ನಿಜವೆಂದು ವಿಶ್ವಾಸವಿಟ್ಟು ಆ ಕೂ ಡಲೆ ಆ ನಾಯಿಯನ್ನು ತನ್ನ ಬಗಲೊಳಗಿಂದ ಇಳಿಸಿ ಅದರಕೂಡ ಇನ್ನು ಮುಂದೆ ಎಂದೂ ಸಲಿಗೆಯನ್ನು ಮಾಡುವದಿಲ್ಲೆಂದು ನಿಶ್ಚಯ ಮಾಡಿದನು. ಆದರೆ ಆ ನಾಯಿಗೆ ತನ್ನ ಒಡೆಯನ ಮನಸ್ಸು ಈ ಪ್ರಕಾರ ಏಕೆ ಬದಲು ಆ ಯಿತೆಂಬುವದು ಮೊದಲು ಗೊತ್ತಾಗಲಿಲ್ಲ. ಆದುದರಿಂದ ಅದು ಕೆಲವು ಹೊತ್ತು ಅವನ ಕಡೆಗೆ ಅವನು ತನ್ನನ್ನು ಎತ್ತಿಕೊಂಡು ಮುದ್ದು ಕೊಡಲೆಂದು ಓಡಿ ಬರಹತ್ತಿತು. ಆದರೆ ಆ ಒಡೆಯನು ಅದನ್ನು ಅನೇಕ ಸಾರೆ ಹೊಡೆಯಲಾಗಿ ಅದು ಅವನಿಗೆ ತಿರುಗಿ ಪೀಡಿಸುವದನ್ನು ಬಿಟ್ಟಿತು. ಇದರಂತೆ ನಿನ್ನ ಅವಸ್ಥೆಯು ಇರುತ್ತದೆ. ನೀನು ಇಷ್ಟು ದಿವಸ ನಿನ್ನ ಹೃದಯದಲ್ಲಿ ಇಟ್ಟುಕೊಂಡು ಸಾಕಿ ದಂಥ ವಿಷಯವಾಸನೆಯೆಂಬ ನಾಯಿಯನ್ನು ಈಗ ನೀನು ಬಿಡಬೇಕೆಂದು ಮ ನಸ್ಸು ಮಾಡಿದರೂ ಅದು ನಿನ್ನನ್ನು ಸುಲಭವಾಗಿ ಬಿಟ್ಟುಕೊಡಲಾರದು. ಆದ ರೂ ಅದರಿಂದ ನಿನಗೆ ಏನೂ ಅಪಾಯವು ತಟ್ಟಲಿಕ್ಕಿಲ್ಲ. ಅದನ್ನು ನೀನು ಲಾ ಲನ ಮಾಡಬೇಡ. ಅದು ನಿನ್ನ ಸಮೀಪಕ್ಕೆ “ನನ್ನನ್ನು ಎತ್ತಿಕೋ” ಎಂದು ಬಂದಾಗ ನೀನು ಅದನ್ನು ಚನ್ನಾಗಿ ಥಳಿಸು. ಹೀಗೆ ನೀನು ಮಾಡಲಿಕ್ಕೆ ಹತ್ತಿ ದರೆ ಕೆಲವು ದಿವಸಗಳ ತರುವಾಯ ಅದರ ಕಾಟವು ನಿನಗೆ ತಪ್ಪೀತು.

## ತಾತ್ಪರ್ಯ.

ಮನುಷ್ಯನು ದುಷ್ಟ ವಾಸನೆಗಳಿಗೆ ಎಂದೂ ಅವಕಾಶವನ್ನು ಕೊಡಬಾ ರದು. ಮನಸ್ಸಿನಿಂದಲೇ ಕೆಲವರು ಬುದ್ಧಿವಂತರು, ಕೆಲವರು ಮೂರ್ಖರು, ಕೆಲವರು ಶಿಷ್ಟರು, ಕೆಲವರು ದುಷ್ಟರು, ಕೆಲವರು ಪುಣ್ಯವಂತರು, ಕೆಲವರು ಪಾಪಿಗಳು ಆಗುತ್ತಾರೆ. ಮನಸ್ಸೇ ಪ್ರಪಂಚವು, ಮನಸ್ಸೇ ಯಮಪುರವು, ಮನಸ್ಸೇ ಸ್ವರ್ಗವು, ಮನಸ್ಸೇ ನರಕವು. **ಮನಏವ ಮನುಷ್ಯಾಣಾಂ ಕಾರಣಂ ಬಂಧಮೋಕ್ಷಯೋಃ ॥** ಎಂದು ಭಗವದ್ಗೀತೆಯಲ್ಲಿ ಹೇಳಿ ರುತ್ತದೆ.

# ೩೯. ಅಹಂಕಾರವು.

ಆಕಳದ ಹೊಟ್ಟೆಯಿಂದ ಹೋರಿಯು ಹುಟ್ಟಿದ ಕೂಡಲೆ ಅದು "ಹಂ" ಅಂದರೆ "ಅಹಮ್" ಎಂದು ಒದರುತ್ತದೆ. ಈ ಅಹಂಕಾರದಿಂದ ಅದು ಮುಂದೆ ಎಷ್ಟು ಕಷ್ಟಗಳನ್ನು ಅನುಭೋಗಿಸಬೇಕಾಗುತ್ತದೆ ನೋಡಿರಿ! ಅದು ದೊಡ್ಡದಾದ ಕೂಡಲೆ ಅದನ್ನು ನೇಗಿಲಕ್ಕೆ ಹೂಡುವದರಿಂದ ಅದು ಮುಂಜಾನೆಯಿಂದ ಸಂಜೆಯು ವರೆಗೆ ಬಿಸಿಲಲ್ಲಿಯೂ ಮಳೆಯಲ್ಲಿಯೂ ಹೊಲದೊಳಗೆ ದುಡಿಯಬೇಕಾಗುತ್ತದೆ. ಒಮ್ಮೊಮ್ಮೆ ಅದನ್ನು ಕಟಕನು ಕೊಲ್ಲುತ್ತಾನೆ. ಆಗ ಮಾಂಸಭಕ್ಷಕರು ಅದರ ಮಾಂಸವನ್ನು ತಿಂದುಬಿಡುತ್ತಾರೆ. ಅದರ ತೊಗಲನ್ನು ಮೊಚ್ಚೆಗಾರರು ಒಯ್ದು ಅದನ್ನು ಹದ ಮಾಡಿ ಅದರಿಂದ ಮೊಚ್ಚೆಗಳನ್ನು ಮಾಡುತ್ತಾರೆ. ಅದರ ತೊಗಲಿನಿಂದ ಮೃದಂಗಗಳನ್ನು ಸಹ ಮಾಡುತ್ತಾರೆ. ಆಗ ಮೃದಂಗ ಬಾರಿಸುವವರು ಏನೂ ಕರುಣವಿಲ್ಲದೆ ಅದರ ನೆತ್ತಿಯ ಮೇಲೆ ತಮ್ಮ ಕೈಯಿಂದ ಹೊಡೆಯುತ್ತಾರೆ. ಮೃದಂಗವು ಚನ್ನಾಗಿ ನಾದವನ್ನು ಕೊಡದಿದ್ದರೆ ಒಮ್ಮೊಮ್ಮೆ ಸುತ್ತಿಗೆಯಿಂದ ಸಹ ಹೊಡೆಯುತ್ತಾರೆ. ಪಿಂಜಾರನು ಅರಳಿಯನ್ನು ಹಿಂಜುವಗೋಸ್ಕರ ಅದರ ಕರಳುಗಳಿಂದ ತನ್ನ ಧನುಷ್ಯದ ಹೆದೆಯನ್ನು ಮಾಡಿದ ಬಳಿಕ ಆ ಬಡಪ್ರಾಣಿಯ ಕಷ್ಟಗಳು ಮುಗಿಯುವವು. ಯಾಕಂದರೆ ಆಗ ಅದು "ಹಮ್" "ಹಮ್" (ನಾನು, ನಾನು) ಎಂದು ಒದರುವ ಬದಲಾಗಿ "ತುಹಮ್" "ತುಹಮ್" (ನೀನು, ನೀನು) ಎಂದು ಒದರುವದು.

## ತಾತ್ಪರ್ಯ.

ಅಹಂಕಾರವನ್ನು ನಾಶಪಡಿಸುವದು ಬಹಳ ಅಗತ್ಯವಿರುತ್ತದೆ. "ನಾನು" ಎಂಬುವದು ಹೋಗಿ "ನೀನು" ಎಂಬುವದು ಬರುವ ತನಕ ಮನುಷ್ಯನಿಗೆ ಎಂದೂ ಗತಿಯಾಗದು. **"ಹಮ್ಮಿನ ಬಿಮ್ಮು, ಸೊಮ್ಮಿನ ಸಂಬಂಧ ಬಿಟ್ಟು, ಕಿಂಕರರ ಕಿಂಕರನಾಗಬೇಕು"** ಎಂದು ಶ್ರೀ ಬಸವೇಶ್ವರ ಬೋಧಾಮೃತದಲ್ಲಿ ಹೇಳಿರುತ್ತದೆ. ಇದನ್ನು ಎಲ್ಲರೂ ಚನ್ನಾಗಿ ಲಕ್ಷ್ಯದಲ್ಲಿಟ್ಟು ನಡೆಯತಕ್ಕದ್ದು.

---

# ೪೦. ದುಡ್ಡಿನ ಸೊಕ್ಕು.

ದ್ರವ್ಯವು ಬಹಳ ಪ್ರಬಲವಾದ ಉಪಾಧಿಯು ಇರುತ್ತದೆ. ಮನುಷ್ಯನಿಗೆ ಶ್ರೀಮಂತಿಕೆಯು ಬಂದ ಕೂಡಲೆ ಅವನ ಸ್ವಭಾವದಲ್ಲಿ ಮಹತ್ವವಾದ ಬದಲು ಉಂಟಾಗುತ್ತದೆ. ಬಡವನಿರುವಾಗ ಇರುವ ನಮ್ರತೆಯು ಶ್ರೀಮಂತಿಕೆಯು ಬಂದ ಕೂಡಲೆ ಉಳಿಯುವದಿಲ್ಲ. ಒಬ್ಬ ಬಡ ಬ್ರಾಹ್ಮಣನು ಭಗವಾನ್ ರಾಮ ಕೃಷ್ಣ ಪರಮಹಂಸರ ಬಳಿಗೆ ಉಪದೇಶವನ್ನು ಕೇಳಲಿಕ್ಕೆ ಮೇಲಿಂದ ಮೇಲೆ ಬರುತ್ತಿದ್ದನು. ಆದರೆ ಕೆಲವು ದಿವಸಗಳ ನಂತರ ಅವನು ಬರುವದನ್ನು ಬಿಟ್ಟನು. ಅವನು ಏಕೆ ಒಮ್ಮೆಲೆ ಬರುವದನ್ನು ಬಿಟ್ಟನೆಂಬುವದು ಯಾರಿಗೂ ತಿಳಿಯಲಿಲ್ಲ. ಆದರೆ ಕೆಲವು ದಿವಸಗಳ ತರುವಾಯ ಭಗವಾನರು ತಮ್ಮ ಕೆಲವು ಶಿಷ್ಯರೊಂದಿಗೆ ಒಂದು ಹಡಗದಲ್ಲಿ ಕುಳಿತು ಒಂದು ಊರಿಗೆ ಹೋಗಿ ಆ ಹಡಗದಿಂದ ಕೆಳಗೆ ಇಳಿಯುವಾಗ ಆ ಬ್ರಾಹ್ಮಣನು ಗಂಗಾನದಿಯ ದಂಡೆಯ ಮೇಲೆ ಕೆಲವು ದೊಡ್ಡ ಜನರ ಪದ್ಧತಿಯ ಪ್ರಕಾರ ನದಿಯ ಗಾಳಿಯಲ್ಲಿ ವಿಹಾರ ಮಾಡುತ್ತ ಕುಳಿತುಕೊಂಡಿದ್ದನು. ಅವನು ಭಗವಾನರನ್ನು ನೋಡಿದವನೇ ಆಢ್ಯತೆಯಿಂದ ವಂದನೆಗಳನ್ನು ಮಾಡಿ ಅವರಿಗೆ–“ ಠಾಕೂರರೇ! ಈಗ ನೀವು ಹೇಗಿರುವಿರಿ?” ಎಂದು ಪ್ರಶ್ನೆ ಮಾಡಿದನು. ಆಗ ಅವರು ಅವನು ಮಾತಾಡಿದ ಧ್ವನಿಯ ಮೇಲಿಂದಲೂ ಅವನ ರೀತಿಯ ಮೇಲಿಂದಲೂ ತಮ್ಮ ಹತ್ತರ ಇದ್ದ ಒಬ್ಬ ಶಿಷ್ಯನಿಗೆ–“ ಈಗ ಇವನಿಗೆ ಕೆಲವು ದುಡ್ಡು ಬಂದಿರಬಹುದು! ಆದುದರಿಂದ ಇವನ ನಡುವಳಿಯಲ್ಲಿ ಬಹಳ ಬದಲಾಗಿರುವದು ನೋಡಿದಿಯಾ?” ಎಂದು ಒಮ್ಮೆಲೆ ಕೇಳಿದರು. ಅದಕ್ಕೆ ಆ ಶಿಷ್ಯನು ಖೊಳ್ಳನೆ ನಕ್ಕನು.

## ತಾತ್ಪರ್ಯ.

ಬಡವನಿಗೆ ಶ್ರೀಮಂತಿಕೆಯು ಬಂದ ಕೂಡಲೆ ಅವನಿಗೆ ತೀವ್ರವೇ ಸೊಕ್ಕು ಬಂದು ಅವನ ಕಣ್ಣುಗಳು ತಿರುಗಿ ಹೋಗುವವು. ಮತ್ತು ಅವನ ಸ್ವಭಾವದಲ್ಲಿ ಬಹಳ ಹೆಚ್ಚುಕಡಿಮೆಯಾಗುವದು. ಅವನಿಗೆ ಹಿರಿಯರು, ಗುರುಗಳು, ಪೂಜ್ಯರು ಯಾರೂ ತಿಳಿಯರು. ತನ್ನ ದ್ರವ್ಯಮದದಿಂದ ಅವನು ತಾನೇ ಎಲ್ಲರಿಗಿಂತ ಹಿರಿಯನು ಮತ್ತು ಪೂಜ್ಯನೆಂದು ತಿಳಿಯುತ್ತಾನೆ. ಆದುದರಿಂದ ಅವನು

**ಮೂಢೋ ಮೂರ್ಖೋ ಗಾರ್ದಭೋ ಏಕರಾಶಿ** ಎಂಬಂತೆ ಈ ಮೂರು ಜನರ ಮಾಲಿಕೆಯಲ್ಲಿ ಸೇರುವನು.

---

## ೪೧. ಈಶ್ವರಪ್ರಾಪ್ತಿ ಮಾಡಿಕೊಂಡವನೂ ಚಿಕ್ಕ ಮಗುವೂ ಒಂದೇ.

ತೆಂಗಿನ ಗಿಡದ ಎಲೆಯು ಕೆಳಗೆ ಕಳಚಿ ಬಿದ್ದರೂ ಅದು ಆ ಗಿಡದಲ್ಲಿ ಒಮ್ಮೆ ಇದ್ದ ಗುರುತು ಮಾಜುವದಿಲ್ಲ. ಆದುದರಿಂದ ಆ ಗಿಡವನ್ನು ನೋಡುವವರಿಗೆ ಎಲೆಯು ಅಲ್ಲಿ ಇತ್ತೆಂಬುವದು ಕಾಣುವದು. ಇದರಂತೆ ಈಶ್ವರ ಪ್ರಾಪ್ತಿಯನ್ನು ಮಾಡಿಕೊಂಡವನು ಸಿಟ್ಟು ಮತ್ತು ಆಶೆಗಳನ್ನು ಬಿಟ್ಟರೂ ಅವುಗಳು ಮುಂಚೆ ಇದ್ದ ಗುರುತುಗಳು ಸ್ವಲ್ಪಾದರೂ ಕಾಣಿಸುವವು. ಈಶ್ವರ ಪ್ರಾಪ್ತಿಯನ್ನು ಮಾಡಿಕೊಂಡವನು ಒಬ್ಬ ಚಿಕ್ಕ ಮಗುವಿನಂತೆ ಇರುತ್ತಾನೆ. ನಾವು ಒಬ್ಬ ಚಿಕ್ಕ ಮಗುವಿಗೆ ಎರಡು ದುಡ್ಡಿನ ಆಟಿಕೆಯ ಸಾಮಾನು ಕೊಟ್ಟಲ್ಲಿ ಅವನು ಕೆಲವು ರೂಪಾಯಿಗಳ ಬೆಲೆ ಬಾಳುವ ತನ್ನ ಮೈಮೇಲಿನ ಹೊದಿಕೆಯನ್ನು ಸಹ ಕೊಡುತ್ತಾನೆ. ಅವನು ಮೊದಲಿಗೆ-“ ನಾನು ಇದನ್ನು ಕೊಡುವದಿಲ್ಲ. ನಮ್ಮ ಅಪ್ಪನು ಇದನ್ನು ನನಗೆ ಕೊಂಡು ಕೊಟ್ಟಿರುವನು” ಎಂದು ಹೇಳುತ್ತಾನೆ. ಆದರೂ ಅವನು ಕಡೆಗೆ ಅದನ್ನು ಕೊಡಲಿಕ್ಕೆ ಒಪ್ಪಿಕೊಳ್ಳುತ್ತಾನೆ. ಚಿಕ್ಕ ಮಗುವಿಗೆ ಎಲ್ಲವೂ ಅಷ್ಟೇ. ಎಲ್ಲರೂ ಅಷ್ಟೇ. ಆ ಮಗುವಿಗೆ ಉಚ್ಚ ನೀಚ ಭೇದವು ಏನೂ ಇರುವದಿಲ್ಲ. ಆದುದರಿಂದ ಆ ಮಗುವು ಜಾತಿಭೇದವನ್ನು ಸಹ ಎಣಿಸುವದಿಲ್ಲ. ಆ ಮಗುವಿನ ತಾಯಿಯು ಅವನಿಗೆ- “ ಇಂಥವನು ನಿನ್ನ ಅಣ್ಣನಿರುತ್ತಾನೆ” ಎಂದು ಹೇಳಿದರೆ ಆ ಮಗುವು ಬೇಕಾದವನ ಬದಿಯಲ್ಲಿ ಕೂತು ಅವನ ಎಡೆಯೊಳಗಿಂದ ಅನ್ನವನ್ನು ಉಣ್ಣುವದು. ಆ ಎರಡನೇಯವನು ಒಡಿಗನ ಮಗನಿದ್ದರೂ ಆ ಮಗುವು ಉಣ್ಣಲಿಕ್ಕೆ ಹಿಂದು ಮುಂದೆ ನೋಡುವದಿಲ್ಲ. ಆ ಮಗುವಿಗೆ ಪರಕೀಯತ್ವವು ಅಥವಾ ದ್ವೇಷಭಾವವು ಇರುವದಿಲ್ಲ. ಹಾಗೂ ಅದಕ್ಕೆ ಶುಚಿಯ ಅಥವಾ ಅಶುಚಿಯ ವಿಚಾರವೇ ಬರುವದಿಲ್ಲ.

## ತಾತ್ಪರ್ಯ.

ಈಶ್ವರ ಪ್ರಾಪ್ತಿಯನ್ನು ಮಾಡಿಕೊಂಡವನು ಇಡೀ ಜಗತ್ತು ತನ್ನ ಕುಟುಂಬವೆಂತಲೂ ಜಗತ್ತಿನೊಳಗಿನ ಯಾವತ್ತು ಜಾತಿಗಳ, ಧರ್ಮಗಳ, ಮತ್ತು ಪಂಥಗಳ ಜನರು ತನ್ನ ಒಡಹುಟ್ಟಿದ ಅಣ್ಣ ತಮ್ಮಂದಿರೆಂತಲೂ ತಿಳಿದುಕೊಂಡು ಅವರ ಕೂಡ ನಡೆಯುತ್ತಾನೆ. ಅವನು ಯಾವದೂ ಭೇದವನ್ನು ಮಾಡುವದಿಲ್ಲ. ತಾನು ಮತ್ತು ಇತರ ಪ್ರಾಣಿಮಾತ್ರರು ಪರಮಾತ್ಮನಿಂದ ನಿರ್ಮಾಣವಾದ ಬಂಧುಗಳೆಂದು ತಿಳಿದುಕೊಂಡು ಅವರ ಮೇಲೆ ಸಮಾನ ಪ್ರೀತಿಯನ್ನು ಮಾಡುವನು.

---

## ೪೨. ಒಕ್ಕಲಿಗನ ಕುಶಲತನವು.

ಒಕ್ಕಲಿಗರು ತಮಗೆ ಎತ್ತುಗಳನ್ನು ಮಾರಾಟಕ್ಕೆ ತೆಗೆದುಕೊಳ್ಳುವಾಗ ಬಹಳ ಬುದ್ಧಿಯನ್ನು ಉಪಯೋಗಿಸುತ್ತಾರೆ. ಅವರು ಚಲೋ ಎತ್ತು ಯಾವದು, ಕೆಟ್ಟ ಎತ್ತು ಯಾವದು ಎಂಬದರ ಪರೀಕ್ಷೆಯನ್ನು ಚನ್ನಾಗಿ ಮಾಡುತ್ತಾರೆ. ಯಾವ ಎತ್ತುಗಳ ಎದೆಯು ಚನ್ನಾಗಿ ಇರುತ್ತದೆ ಹಾಗೂ ಯಾವ ಎತ್ತುಗಳು ಎದೆಯನ್ನು ಒಡಕೊಂಡಿರುತ್ತವೆ ಎಂಬದು ಅವರಿಗೆ ಚನ್ನಾಗಿ ಗೊತ್ತಿರುವದು. ಅವರು ತಾವು ಯಾವದಾದರೂ ಎತ್ತು ಮಾರಲಿಕ್ಕೆ ತೆಗೆದುಕೊಳ್ಳುವ ಮುಂಚೆ ಅದರ ಬಾಲವನ್ನು ಹಿಡಿಯುತ್ತಾರೆ. ಯಾವ ಎತ್ತುಗಳು ಚುರುಕು ಇರುವದಿಲ್ಲವೋ ಅವುಗಳು ತಮ್ಮ ಬಾಲವನ್ನು ಹಿಡಿಯುವವನಿಗೆ ಏನೂ ವಿರೋಧಿಸುವದಿಲ್ಲ. ಅವು ತಮಗೆ ನಿದ್ರೆಯು ಬಂದಿರುವದೋ ಏನೋ ಎಂಬಂತೆ ನೆಲದ ಮೇಲೆ ಬಿದ್ದುಕೊಳ್ಳುತ್ತವೆ. ಆದರೆ ಚುರುಕು ಇರುವಂಥ ಎತ್ತುಗಳು ತಮ್ಮ ಬಾಲವನ್ನು ಯಾರಾದರೂ ಹಿಡಿದರೆ ಅವು ತಮ್ಮ ಸಂಗಡ ಸಲಿಗೆಯನ್ನು ಬಯಸುವವರ ಕೃತಿಯನ್ನು ನಿಷೇಧ ಮಾಡಲಿಕ್ಕೆ ಠಣಕ್ಕನೆ ಜಿಗಿಯುತ್ತವೆ. ಆಗ ಒಕ್ಕಲಿಗರು ಇಂಥ ಚುರುಕು ಎತ್ತುಗಳನ್ನು ಮಾರಲಿಕ್ಕೆ ಕೊಳ್ಳುತ್ತಾರೆ.

## ತಾತ್ಪರ್ಯ.

ಯಾವನೊಬ್ಬ ಮನುಷ್ಯನು ಈ ಜಗತ್ತಿನಲ್ಲಿ ಯಶಸ್ಸು ಸಂಪಾದಿಸಬೇಕಾದರೆ ಅವನಲ್ಲಿ ಸ್ಥೈರ್ಯ, ಧೈರ್ಯ, ಗಾಂಭೀರ್ಯ, ಔದಾರ್ಯಾದಿ ಗುಣಗಳು ಇರಬೇಕು. ಆದರೆ ಅನೇಕ ಜನರಲ್ಲಿ ಈ ಪ್ರಕಾರದ ಗುಣಗಳು ಇರುವದಿಲ್ಲ. ಅವರು ಬಹಳ ಅಂಜುಬುರುಕರು, ಮಿತಿಮೀರಿದ ವಿನಯವುಳ್ಳವರು, ಮಾನಸಿಕ ದುರ್ಬಲರು, ಸ್ಥಿರಪ್ರಯತ್ನ ಮಾಡುವದಕ್ಕೆ ಸಾಕಷ್ಟು ಸಾಮರ್ಥ್ಯವಿಲ್ಲದವರು ಮತ್ತು ಸ್ವಾಭಿಮಾನ ಶೂನ್ಯರು ಇರುತ್ತಾರೆ. ಇದರಿಂದ ಅವರಿಗೆ ಯಾರೂ ಮನ್ನಣೆಯನ್ನು ಮಾಡುವದಿಲ್ಲ.

---

## ೪೩. ಮಾಯಾ ನಿವಾರಣವು.

ಮಾಯೆಯು ಗುರುತು ಹತ್ತಿದ ಕೂಡಲೆ ಅದು ಓಡಿ ಹೋಗುತ್ತದೆ. ಅದು ಹೇಗೆಂದರೆ:– ಒಬ್ಬ ಬ್ರಾಹ್ಮಣನು ಒಂದು ದಿವಸ ತನ್ನ ಶಿಷ್ಯನ ಮನೆಗೆ ನಡೆದಿದ್ದನು. ಆದರೆ ಅವನ ಸಂಗಡ ಹೋಗಲಿಕ್ಕೆ ಯಾರೂ ಆಳು ಇದ್ದಿಲ್ಲ ಆಗ ಅವನು ದಾರಿಯಲ್ಲಿ ಒಬ್ಬ ಮೋಚ್ಚೆಗಾರನು ಹೋಗುವದನ್ನು ಕಂಡು ಅವನಿಗೆ–"ಏನಯ್ಯಾ, ಒಳ್ಳೇ ಮನುಷ್ಯನೇ! ನೀನು ನನ್ನ ಕೂಡ ಆಳಾಗಿ ಬರುವಿಯಾ? ನಿನಗೆ ಯಥಾಸ್ಥಿತವಾಗಿ ಭೋಜನವು ಸಿಗುವದಲ್ಲದೆ ನಿನ್ನ ಉಪಚಾರವಾದರೂ ಚೆನ್ನಾಗಿ ಆಗುವದು. ನನ್ನ ಸಂಗಡಹೊರಟು ನಡೆ" ಎಂದನು. ಅದಕ್ಕೆ ಆ ಮೋಚ್ಚೆಗಾರನು––"ಮಹಾಸ್ವಾಮಿಗಳೇ, ನಾನು ಅತಿಶೂದ್ರನಿರುತ್ತೇನೆ. ನಾನು ನಿಮ್ಮ ಆಳಾಗಿ ಬಂದರೆ ನಿಮಗೆ ಹೇಗೆ ನಡೆದೀತು?" ಎಂದು ಕೇಳಿದನು. ಆಗ ಆ ಬ್ರಾಹ್ಮಣನು ಅವನಿಗೆ–"ಚಿಂತಿಲ್ಲ. ನೀನು ನನ್ನ ಕೂಡ ಇರುವ ತನಕ ಯಾರ ಸಂಗಡವೂ ಮಾತಾಡಬೇಡ ಅಥವಾ ಪರಿಚಯವನ್ನು ಮಾಡಿಕೊಳ್ಳಬೇಡ" ಎಂದು ಹೇಳಿದನು. ಅದಕ್ಕೆ ಆ ಮೋಚ್ಚೆಗಾರನು ಒಡಂಬಟ್ಟು ಆ ಬ್ರಾಹ್ಮಣನ ಕೂಡ ಅವನ ಶಿಷ್ಯನ ಮನೆಗೆ ಹೋದನು. ಅಲ್ಲಿ ಆ ಬ್ರಾಹ್ಮಣನು ಸಾಯಂಕಾಲದಲ್ಲಿ ತನ್ನ ಸಂಧ್ಯಾಕರ್ಮ

ವನ್ನು ಮಾಡುತ್ತಿರಲು ಮತ್ತೊಬ್ಬ ಬ್ರಾಹ್ಮಣನು ಅಲ್ಲಿಗೆ ಬಂದು–"ಅಪ್ಪಯ್ಯಾ, ಅಲ್ಲಿಗೆ ಹೋಗಿ ನನ್ನ ಪಾದರಕ್ಷೆಯನ್ನು ತೆಗೆದುಕೊಂಡು ಬಾ" ಎಂದು ಹೇಳಿದನು. ಆಗ ಆ ಆಳು ತನ್ನ ಒಡೆಯನ ಅಪ್ಪಣೆಯ ಮೇರೆಗೆ ಆ ಎರಡನೇ ಬ್ರಾಹ್ಮಣನಿಗೆ ಏನೂ ಉತ್ತರವನ್ನು ಕೊಡಲಿಲ್ಲ. ಅವನು ಎಷ್ಟುಸಾರೆ ತಿರುತಿರುಗಿ ಹೇಳಿದರೂ ಆ ಮೊಚ್ಚೆಗಾರನು ಸುಮ್ಮನೆ ಇದ್ದನು. ಚಾ ಚೂ ಎಂದು ಏನೂ ಮಾತಾಡಲಿಲ್ಲ. ಇದನ್ನು ನೋಡಿ ಆ ಹೊಸದಾಗಿ ಬಂದ ಬ್ರಾಹ್ಮಣನು ಬಹಳ ಸಿಟ್ಟಿಗೆದ್ದು–"ಎಲೋ, ನಿನಗೆ ನನ್ನಂಥ ಬ್ರಾಹ್ಮಣನ ಆಜ್ಞೆಯನ್ನು ಮೀರಲಿಕ್ಕೆ ಹೇಗೆ ಎದೆಯಾಯಿತು? ನಿನ್ನ ಜಾತಿ ಯಾವದು? ನೀನು ಮೊಚ್ಚೆಗಾರನೋ?" ಎಂದು ನುಡಿದನು. ಇದನ್ನು ಕೇಳಿದವನೇ ಆ ಮೊಚ್ಚೆಗಾರನು ಅಂಜಿಕೆಯಿಂದ ನಡಗುತ್ತ ತನ್ನ ಒಡೆಯನ ಬಳಿಗೆ ಬಂದು ಅವನ ಕಡೆಗೆ ಖಿನ್ನವಾದ ಮುದ್ರೆಯಿಂದ ನೋಡುತ್ತ–"ಪೂಜ್ಯರೇ, ಇಲ್ಲಿಯ ಜನರಿಗೆ ನನ್ನ ಗುರುತು ಹತ್ತಿತು. ಆದುದರಿಂದ ಇನ್ನುಮೇಲೆ ನನಗೆ ಇಲ್ಲಿ ಇರಲಿಕ್ಕೆ ಧೈರ್ಯವಾಗುವದಿಲ್ಲ. ನಾನು ಇಲ್ಲಿಂದ ಪಲಾಯನ ಮಾಡುತ್ತೇನೆ" ಎಂದು ಮಾತಾಡುತ್ತ ಕಾಲಿಗೆ ಬುದ್ಧೀ ಹೇಳಿದನು.

## ತಾತ್ಪರ್ಯ.

ಮನುಷ್ಯನಿಗೆ ಧೈರ್ಯವು ಮತ್ತು ಆತ್ಮ ವಿಶ್ವಾಸವು ಅವಶ್ಯವಾಗಿ ಇರಬೇಕು. ತನಗೆ ಸತ್ಸಂಗತಿಯಾದ ಕೂಡಲೆ ತಾನು ಕಡಿಮೆಯವನೆಂಬ ವಿಚಾರವನ್ನು ಬಿಟ್ಟುಬಿಡಬೇಕು. **"ಜತೆಯಂತೆ ಮತಿ"** ಯಾಗುವದು. ಈ ಬಗ್ಗೆ ಸರ್ವಜ್ಞ ಕವಿಯು ಹೇಳುವದೇನಂದರೆ:—

**ಒಳ್ಳಿದರ ಒಡನಾಡಿ ಕಳ್ಳನೊಳ್ಳಿದನಕ್ಕು।**
**ಒಳ್ಳಿದ ಕಳ್ಳರೊಡನಾಡಿ ಅವ ಕುದ್ದ।**
**ಕಳ್ಳ ತಾನಕ್ಕು! ಸರ್ವಜ್ಞ** ॥೧॥

# ೪೪. ಹೆಂಡತಿಯು ಅಂತಃಪುರದ ಗುರುವು!

ಒಬ್ಬ ಬ್ರಾಹ್ಮಣನಿಗೆ ಒಬ್ಬ ಅರಿವೆಯ ವ್ಯಾಪಾರಸ್ಥನು ಶಿಷ್ಯನಾಗಿದ್ದ ನು. ಆ ಶಿಷ್ಯನು ಆ ಬ್ರಾಹ್ಮಣನ ಹತ್ತರ ಯಾವಾಗಲು ಧರ್ಮೋಪದೇಶವನ್ನು ಕೇಳಲಿಕ್ಕೆ ಹೋಗುತ್ತಿದ್ದನು. ಆದರೂ ಅವನ ಕೃಪಣತನವು ಹೋಗಿದ್ದಿಲ್ಲ. ಒಂದು ದಿವಸ ಆ ಬ್ರಾಹ್ಮಣನಿಗೆ ಅವನ ಪುರಾಣ ಪುಣ್ಯ ಕಥೆಗಳ ಗಂಟನ್ನು ಕಟ್ಟಲಿಕ್ಕೆ ಒಂದು ಅರಿವೆಯ ಸಣ್ಣ ತುಂಡು ಬೇಕಾಗಿತ್ತು. ಆಗ ಅವನು ಒಂದು ದಿವಸ ತನ್ನ ಶಿಷ್ಯನ ಅಂಗಡಿಗೆ ಹೋಗಿ ಒಂದು ಅರಿವೆಯ ಸಣ್ಣ ತುಂಡನ್ನು ಬೇಡಿದನು. ಆಗ ಆ ಶಿಷ್ಯನು—"ಗುರುಗಳೇ, ನೀವು ಒಂದು ಗಳಿಗೆ ಮುಂಚಿತವಾಗಿಯೇ ಬಂದಿದ್ದರೆ ಅದನ್ನು ನಿಮಗೆ ಕೊಡುತ್ತಿದ್ದೆನು. ಈಗೀಗ ನಾನು ಅದನ್ನು ಮಾರಿಬಿಟ್ಟೆನು. ಇದಕ್ಕಾಗಿ ನನಗೆ ಬಹಳ ಅಸಮಾಧಾನವಾಗುತ್ತದೆ. ಅದನ್ನು ನಿಮಗೆ ಮತ್ತೊಮ್ಮೆ ಯಾವಾಗಾದರೂ ಕೊಡುವೆನು. ನೀವು ಮತ್ತೊಮ್ಮೆ ನನಗೆ ನೆನಪು ಮಾಡಿರಿ" ಎಂದು ಹೇಳಿದನು. ಅದನ್ನು ಆ ಬ್ರಾಹ್ಮಣನು ಕೇಳಿ ನಿರಾಶೆಪಟ್ಟು ತನ್ನ ಮನೆಗೆ ಹೋಗಹತ್ತಿದನು. ಈ ಗುರು ಶಿಷ್ಯರ ಸಂವಾದವನ್ನು ಆ ಅರಿವೆಯ ವ್ಯಾಪಾರಸ್ಥನ ಹೆಂಡತಿಯು ಆ ಅಂಗಡಿಯ ಮಗ್ಗಲದೊಳಗಿದ್ದ ತನ್ನ ಮನೆಯೊಳಗೆ ನಿಂತುಕೊಂಡು ಕೇಳಿ ಆ ಬ್ರಾಹ್ಮಣನನ್ನು ತನ್ನ ಬಳಿಗೆ ಕರೆಯಿಸಿ ಅವನ ಬಾಯಿಂದ ಎಲ್ಲ ವೃತ್ತಾಂತವನ್ನು ಕೇಳಿಕೊಂಡು—"ಸ್ವಾಮಿ, ನೀವು ಈಗ ಸ್ವಸ್ಥಚಿತ್ತರಾಗಿ ಹೋಗಬೇಕು. ನಾಳೆ ಬೆಳಿಗ್ಗೆ ನಿಮಗೆ ನೀವು ಬೇಡುವ ಅರಿವೆಯ ತುಂಡನ್ನು ಕೊಡಿಸುವೆನು" ಎಂದು ಅವನಿಗೆ ಸಮಾಧಾನ ಮಾಡಿ ಕಳುಹಿಸಿದಳು. ವ್ಯಾಪಾರಸ್ಥನು ಸಾಯಂಕಾಲಕ್ಕೆ ತನ್ನ ವ್ಯಾಪಾರವನ್ನು ಮುಗಿಸಿಕೊಂಡು ಮನೆಯೊಳಗೆ ಬಂದ ಕೂಡಲೆ ಅವಳು ತನ್ನ ಗಂಡನಿಗೆ—"ಅಂಗಡಿಗೆ ಕೀಲಿಯನ್ನು ಚನ್ನಾಗಿ ಹಾಕಿರುವಿರೋ?" ಎಂದು ಕೇಳಿದಳು. ಅದಕ್ಕೆ ಅವನು ತನ್ನ ಹೆಂಡತಿಗೆ—"ಹೌದು. ಹಾಕಿರುವೆನು. ಆದರೆ ಈ ಪ್ರಶ್ನೆಯನ್ನು ನೀನು ಕೇಳುವ ಕಾರಣವೇನು?" ಎಂದು ಕೇಳಿದನು. ಆಗ ಅವನ ಹೆಂಡತಿಯು—"ನೀವು ಈಗಲೇ ಅಂಗಡಿಗೆ ಹೋ

ಗಿ ನನಗೆ ಎರಡು ಉತ್ತಮವಾದ ಅರಿವೆಯು ತುಂಡುಗಳನ್ನು ತಂದುಕೊಡಿರಿ" ಎಂದು ಹೇಳಿದಳು. ಅದಕ್ಕೆ ಆ ವ್ಯಾಪಾರಸ್ಥನು-" ಇಷ್ಟು ಅವಸರವೇಕೆ? ನಾಳೆ ನಿನಗೆ ಬೇಕಾದಷ್ಟು ಉತ್ತಮ ಅರಿವೆಯು ತುಂಡುಗಳನ್ನು ತಂದುಕೊಡುತ್ತೇನೆ. ಎಂದು ಹೇಳಿದನು. ಆದರೆ ಅವನ ಹೆಂಡತಿಯು-" ನನಗೆ ಅವುಗಳನ್ನು ಕೊಡುವದಿದ್ದರೆ ಈಗಲೇ ತಂದು ಕೊಡಿರಿ. ಇಲ್ಲದಿದ್ದರೆ ನನಗೆ ಬೇಡವೇ ಬೇಡ" ಎಂದು ಉತ್ತರ ಕೊಟ್ಟಳು. ಆಗ ಆ ವ್ಯಾಪಾರಸ್ಥನು ನಿರುಪಾಯದಿಂದ ಅಂಗಡಿಗೆ ತಿರುಗಿ ಹೋಗಿ ಕೀಲಿ ತೆಗೆದು ಎರಡು ಉತ್ತಮವಾದ ಅರಿವೆಯು ತುಂಡುಗಳನ್ನು ತಂದುಕೊಟ್ಟನು. ಅವುಗಳನ್ನು ಅವಳು ಮರುದಿವಸ ಬೆಳಿಗ್ಗೆ ತನ್ನ ಆಳಿನ ಕೈಯಿಂದ ಆ ಬ್ರಾಹ್ಮಣನ ಕಡೆಗೆ ಕಳುಹಿಸಿಕೊಟ್ಟಳು.

## ತಾತ್ಪರ್ಯ.

ಹೆಂಡತಿಯು ಅಂತಃಪುರದ ಗುರುವು ಇರುತ್ತಾಳೆ. ಅವಳ ಅಪ್ಪಣೆಯನ್ನು ಕೇಳದಿದ್ದರೆ ಗಂಡನಿಗೆ ಮನೆಯಲ್ಲಿ ಶಾಂತಿಯೇ ಇರುವದಿಲ್ಲ. ಹೆಂಡತಿಯು ದೊಡ್ಡ ಮನಸ್ಸಿನವಳು, ದಯಾದಾಕ್ಷಿಣ್ಯವುಳ್ಳವಳು, ಉದಾರ ಬುದ್ಧಿಯವಳು ಇದ್ದರೆ ಮನೆಯ ಯಜಮಾನನ ಗೌರವವು ಹೆಚ್ಚಾಗುತ್ತದೆ. ಹೆಂಡತಿಯು ಕೃಪಣಳು ಅಥವಾ ಕ್ಷುದ್ರ ಮನಸ್ಸಿನವಳು ಇದ್ದರೆ ಗಂಡನು ಉದಾರ ಮನಸ್ಸಿನವನಿದ್ದರೂ ಅವಳು ಅವನ ಸತ್ಕಾರ್ಯಕ್ಕೆ ವಿಘ್ನವನ್ನು ತರುತ್ತಾಳೆ. ಹೆಂಡತಿಯು ಯಾವ ಪ್ರಕಾರದವಳು ಇರಬೇಕೆಂಬದು ಈ ಕೆಳಗಿನ ಸುಭಾಷಿತದಲ್ಲಿ ಚನ್ನಾಗಿ ವಿವರಿಸಲ್ಪಟ್ಟಿರುತ್ತದೆ. ಅದೇನಂದರೆ:—

**ಸಾಧ್ವೀ ಶೀಲವತೀ ದಯಾವಸುಮತೀ ದಾಕ್ಷಿಣ್ಯ ಲಜ್ಜಾವತೀ। ತನ್ವೀ ವ್ಯಾಜಪರಾಙ್ಮುಖೀ ಸ್ಮಿತವತೀ ಮುಗ್ಧಾ ಪ್ರಿಯಾಲಾಪಿನೀ॥ ದೇವಬ್ರಾಹ್ಮಣ ಬಂಧು ಸಜ್ಜನರತಾ ಯಸ್ಯಾಸ್ತಿ ಭಾರ್ಯಾಗೃಹೇ। ತಸ್ಯಾರ್ಥಾಗಮ ಕಾಮಮೋಕ್ಷ ಫಲದಾಃ ಕುರ್ವಂತಿ ಪುಣ್ಯಂ ಕ್ರಿಯಾಃ॥**

(ಸಾಧ್ವಿಯೂ, ಸುಶೀಲೆಯೂ, ದಯಾವಂತಳೂ, ಬುದ್ಧಿವಂತಳೂ, ದಾಕ್ಷಿಣ್ಯವುಳ್ಳವಳೂ, ವಿನಯವುಳ್ಳವಳೂ, ಲಾವಣ್ಯವತಿಯೂ, ನಿಷ್ಕಪಟಿಯೂ,

ಮಧುರಹಾಸ್ಯಳೂ, ಮೃದು ನುಡಿಗಳನ್ನು ಆಡುವವಳೂ, ದೇವಬ್ರಾಹ್ಮಣರನ್ನು ಮತ್ತು ಬಂಧು ಜನರನ್ನು ಆದರಸತ್ಕಾರ ಮಾಡುವವಳೂ ಆದ ಹೆಂಡತಿಯು ಗಂಡನಿಗೆ ಅರ್ಥ, ಕಾಮ, ಮೋಕ್ಷಗಳು ಲಭಿಸುವಂತೆ ಪುಣ್ಯ ಕಾರ್ಯಗಳನ್ನು ಮಾಡುತ್ತಾಳೆ.)

---

## ೪೫. ಪೂರ್ಣ ಶ್ರದ್ಧೆಯು ಬೇಕು.

ಪರಮೇಶ್ವರನನ್ನು ಕಾಣಬೇಕಾದರೆ ಆತನಲ್ಲಿ ನಿಜವಾದ ಶ್ರದ್ಧೆಯನ್ನಿಡಬೇಕು. ಸಣ್ಣ ಮಗುವು ತನ್ನ ತಾಯಿಯನ್ನು ಕಾಣುವದಕ್ಕಾಗಿ ಹೇಗೆ ಹಂಬಲಿಸುವದೋ ಹಾಗೆ ಪರಮೇಶ್ವರನಲ್ಲಿ ಪೂರ್ಣ ಶ್ರದ್ಧೆಯನ್ನು ಅಂದರೆ ಪೂರ್ಣ ವಿಶ್ವಾಸವನ್ನು ಇಟ್ಟ ಹೊರತಾಗಿ ಆತನು ಯಾರಿಗೂ ದರ್ಶನವನ್ನು ಕೊಡಲಾರನು. ಜತಿಲಾ ಎಂಬ ಹೆಸರಿನ ಒಬ್ಬ ಹಳ್ಳಿಯ ಹುಡುಗನು ದಿನಾಲು ಅಡವಿಯೊಳಗಿಂದ ಹಾದು ಒಂದು ಪಟ್ಟಣದೊಳಗಿನ ಸಾಲೆಗೆ ಬರುತ್ತಿದ್ದನು. ಆ ದಾರಿಯಿಂದ ಜನರು ವಿಶೇಷವಾಗಿ ಅಡ್ಡಾಡುತ್ತಿದ್ದಿಲ್ಲ. ಆದುದರಿಂದ ಆ ಹುಡುಗನು ಸಾಲೆಗೆ ಬರಬೇಕಾದರೆ ಅಂಜುತ್ತಿದ್ದನು. ಈ ಸಂಗತಿಯನ್ನು ಅವನು ತನ್ನ ತಾಯಿಗೆ ಹೇಳಲಾಗಿ ಅವಳು ಅವನಿಗೆ–"ನಿನಗೆ ಈ ಪ್ರಕಾರ ಅಂಜಿಕೆಯು ಬಂತೆಂದರೆ ನೀನು ಕೃಷ್ಣನ ಹೆಸರು ತೆಗೆದುಕೊಂಡು ಕರೆ" ಎಂದು ಹೇಳಿದಳು. ಅದಕ್ಕೆ ಆ ಹುಡುಗನು ತನ್ನ ತಾಯಿಗೆ–"ಅವ್ವಾ, ಕೃಷ್ಣನು ಯಾರು?" ಎಂದು ಕೇಳಿದನು. ಆಗ ಆ ಹುಡುಗನ ತಾಯಿಯು–"ಕೃಷ್ಣನು ನಿನ್ನ ಅಣ್ಣನಿರುತ್ತಾನೆ" ಎಂದು ಹೇಳಿದನು. ಈ ಮಾತಿನ ಮೇಲೆ ಆ ಹುಡುಗನು ಪೂರ್ಣವಾಗಿ ವಿಶ್ವಾಸವಿಟ್ಟು ಒಂದು ದಿವಸ ತನಗೆ ದಾರಿಯಲ್ಲಿ ಅಂಜಿಕೆಯು ಬಂದ ಕೂಡಲೆ-"ಅಣ್ಣಾ, ಕೃಷ್ಣಾ! ಬಾ" ಎಂದು ಗಟ್ಟಿಯಾಗಿ ಕೂಗಿದನು. ಅವನು ಮೊದಲನೇ ಸಾರೆ ಕೂಗಿದಾಗ್ಗೆ ಯಾರೂ ಬರಲಿಲ್ಲ. ಇದನ್ನು ನೋಡಿ ಆ ಹುಡುಗನು ಮತ್ತೊಮ್ಮೆ––"ಅಣ್ಣಯ್ಯಾ, ಕೃಷ್ಣಾ! ನೀನು ಎಲ್ಲಿರುತ್ತೀ? ಏಕೆ ಬರಲೊಲ್ಲೆ? ನನಗೆ ಬಹಳ ಅಂಜಿಕೆಯು ಬರಹತ್ತಿದೆ. ತೀವ್ರವಾಗಿ ಬಂದು ನನ್ನನ್ನು ರಕ್ಷಿಸು" ಎಂದು ದೈನ್ಯಭಾವದಿಂದ ಕೂಗಿದನು.

ಆ ಹುಡುಗನ ಆರ್ತಸ್ವರವನ್ನು ಕೇಳಿ ಶ್ರೀಕೃಷ್ಣನು ಒಬ್ಬ ಸಣ್ಣ ಹುಡುಗನ ವೇಷದಿಂದ ಅವನ ಬಳಿಗೆ ಬಂದು–"ಇಕೋ, ನಾನು ಇಲ್ಲಿ ಇದ್ದೇನೆ! ಅಂಜ ಬೇಡ" ಎಂದು ಹೇಳಿ ಅವನನ್ನು ಕರೆದುಕೊಂಡು ಹೋಗಿ ಅವನ ಸಾಲೆಗೆ ಮುಟ್ಟಿಸಿದನು. ಈ ಪ್ರಕಾರ ಶ್ರೀಕೃಷ್ಣನು ಆ ಹುಡುಗನನ್ನು ಸಾಲೆಗೆ ಮುಟ್ಟಿಸಿದ ತರುವಾಯ ಅವನಿಗೆ "ನೀನು ನನ್ನನ್ನು ಕೂಗಿದಾಗ್ಗೆ ನಾನು ನಿನ್ನ ಬಳಿಗೆ ಬರುತ್ತೇನೆ. ನೀನು ಎಷ್ಟು ಮಾತ್ರಕ್ಕೂ ಹೆದರಬೇಡ" ಎಂದು ಹೇಳಿ ಹೊರಟು ಹೋದನು.

## ತಾತ್ಪರ್ಯ.

ಭಗವಂತನು ಅನಾಥಬಂಧು ಇರುತ್ತಾನೆ. ಅವನು ತನಗೆ ಮೊರೆ ಇಡುವವರನ್ನು ನಿಶ್ಚಯವಾಗಿ ರಕ್ಷಣ ಮಾಡುತ್ತಾನೆ. ಆದುದರಿಂದ ಯಾರೂ ಭಯ ಪಡುವ ಅಥವಾ ನಿರಾಶೆಯಾಗುವ ಕಾರಣವಿಲ್ಲ. ಆದರೆ ಸಣ್ಣ ಮಕ್ಕಳು ತಮ್ಮ ತಾಯಿಯ ಮೇಲೆ ಶ್ರದ್ಧೆಯನ್ನು ವಹಿಸುವಂತೆ ನಾವು ಪರಮೇಶ್ವರನ ಮೇಲೆ ಶ್ರದ್ಧೆಯನ್ನು ವಹಿಸಬೇಕು. **ಅನಾಥೋ ದೇವ ರಕ್ಷಕಃ.**

---

# ೪೬. ಭೋಜನ ಸ್ವಾತಂತ್ರ್ಯವು.

ಒಂದು ಸಾರೆ ಒಬ್ಬಾನೊಬ್ಬ ವಿದ್ಯಾರ್ಥಿಯು ಭಗವಾನರ ಬಳಿಗೆ ಬಂದು–"ಪರಮೇಶ್ವರನು ಯಾವತ್ತು ಪ್ರಾಣಿಮಾತ್ರರಲ್ಲಿ ಸಮನಾಗಿಯೇ ವಾಸಿಸುವದರಿಂದ ನಾವು ಪ್ರತಿಯೊಬ್ಬರ ಕೈಯಿಂದ ಮಾಡಿದ ಅನ್ನವನ್ನು ಏಕೆ ಉಣ್ಣಬಾರದು?" ಎಂದು ಪ್ರಶ್ನೆ ಮಾಡಿದನು. ಇದಕ್ಕೆ ಭಗವಾನರು ಉತ್ತರ ಕೊಡುವಾಗ ಆ ವಿದ್ಯಾರ್ಥಿಗೆ–"ಇಂಥ ಪ್ರಶ್ನೆಯನ್ನು ಒಬ್ಬ ದುರುಳ ವೇದಾಂತಿಯು ಮಾತ್ರ ಕೇಳತಕ್ಕದ್ದು. ನೀನು ಉರಿಯನ್ನು ಮಾಡಿ ಅದರ ಮೇಲೆ ಒಮ್ಮೆಲೆ ಬಹಳ ಕಟ್ಟಿಗೆಗಳನ್ನು ತಂದು ಸುರಿವಿದಿ ಎಂದು ತಿಳಿದುಕೋ. ಆಗ ಅದರ ಮೇಲೆ ಪರಿಣಾಮವು ಏನಾಗುವದು?" ಎಂದು ಕೇಳಿದರು. ಅದಕ್ಕೆ ಅವನು–"ಆ ಕಟ್ಟಿಗೆಗಳ ನಡುವೆ ಉರಿಯು ಹೋಗಲಿಕ್ಕೆ ದಾರಿಯು ಇಲ್ಲದ್ದರಿಂದ ಬೆಂಕಿಯು ನುಂದಿ ಹೋಗುವದು" ಎಂದು ಉತ್ತರ ಕೊಟ್ಟನು. ಆ

ಮೇಲೆ ಭಗವಾನರು- "ಒಂದು ಅಡವಿಯಲ್ಲಿ ಬೇಗೆಯು ಹತ್ತಿರುತ್ತದೆಂದು ತಿಳಿ. ಆಗ ಅದರ ಮೇಲೆ ನೀನು ಹಸಿ ಕಂಟಿಗಳನ್ನು ತಂದು ಚಲ್ಲಿದರೆ ಆ ಕಂಟಿಗಳ ಅವಸ್ಥೆಯು ಏನಾಗುವದು?" ಎಂದು ತಿರುಗಿ ಅವನಿಗೆ ಕೇಳಿದರು. ಆಗ ಅವನು-"ಒಂದು ಕ್ಷಣದಲ್ಲಿ ಆ ಕಂಟಿಗಳು ಸುಟ್ಟು ಬೂದಿಯಾಗುವವು" ಎಂದು ಉತ್ತರ ಕೊಟ್ಟನು. ಬಳಿಕ ಭಗವಾನರು ಅವನಿಗೆ-"ಹೀಗಾದ ಬಳಿಕ ನಿನ್ನಲ್ಲಿ ಆಧ್ಯಾತ್ಮ ಜ್ಞಾನದ ಬೆಂಕಿಯು ಕಸವುಳ್ಳದ್ದು ಇಲ್ಲದಿದ್ದರೆ ಎಲ್ಲರಲ್ಲಿ ಭೇದಾಭೇದವಿಲ್ಲದೆ ಉಣ್ಣುವದರಿಂದ ಆ ಬೆಂಕಿಯು ನುಂದಿ ಹೋಗುವದು. ಆ ಆಧ್ಯಾತ್ಮ ಜ್ಞಾನವು ಒಳ್ಳೇ ಕಸವುಳ್ಳದ್ದು ಇದ್ದರೆ ನೀನು ಎಲ್ಲಿ ಉಂಡರೂ ಅದು ನಿನ್ನನ್ನು ಬಾಧಿಸುವದಿಲ್ಲ. ದುರಾಚಾರ ಮಾಡುವವರು ದೇವರ ಗುಡಿಯಲ್ಲಿದ್ದು ದೇವರ ನೈವೇದ್ಯವನ್ನು ಉಂಡರೂ ಅವರಿಗೆ ಮೋಕ್ಷವು ಸಿಗುವದೋ?" ಎಂದು ಕೇಳಿದರು. ಅದಕ್ಕೆ ಆ ವಿದ್ಯಾರ್ಥಿಯು-"ಎಂದಿಗೂ ಸಿಗಲಾರದು. ಅವರಿಗೆ ಮೋಕ್ಷದ ಬದಲು ನರಕವು ದೊರಕುವದಿಲ್ಲವೇ?" ಎಂದು ಭಗವಾನರಿಗೆ ತಿರುಗಿ ಕೇಳಿದನು. ಆಗ ಭಗವಾನರು-"ನೀನು ಎಲ್ಲರಲ್ಲಿ ಉಣ್ಣುವದರಿಂದ ನಿನಗೆ ಬ್ರಹ್ಮಜ್ಞಾನವು ಪ್ರಾಪ್ತವಾಗಿರುತ್ತದೆಂದು ಅಥವಾ ನಿನಗೆ ಪ್ರತಿಯೊಂದು ಕಡೆಗೆ ಪರಮೇಶ್ವರನು ಕಾಣಿಸುತ್ತಾನೆಂದು ತಿಳಿಯಲಿಕ್ಕೆ ಬರುವದಿಲ್ಲ. ಆದರೆ ನಿನಗೆ ಆಕಳದ ಅಥವಾ ಹಂದಿಯ ಮಾಂಸವನ್ನು ತಿನ್ನುವ ಅಪೇಕ್ಷೆಯು ಬಹಳ ಇರುತ್ತದೆಂದು ಮಾತ್ರ ತಿಳಿಯಲಿಕ್ಕೆ ಬರುವದು" ಎಂದು ಉತ್ತರ ಕೊಟ್ಟರು.

## ತಾತ್ಪರ್ಯ.

ದೊಡ್ಡವರ ಹತ್ತರ ದೊಡ್ಡ ಸಂಗತಿಗಳನ್ನು ಮಾತ್ರ ಕೇಳಿಕೊಳ್ಳಬೇಕಲ್ಲದೆ ಕ್ಷುದ್ರ ಸಂಗತಿಗಳನ್ನು ಎಂದೂ ಕೇಳಬಾರದು. ತಮಗೆ ದೊಡ್ಡ ಸಂಗತಿಗಳನ್ನು ಕೇಳಿಕೊಳ್ಳುವದಿಲ್ಲದಿದ್ದರೆ ಅವರ ಮುಂದೆ ತಾವು ಸುಮ್ಮನೆ ಕುಳಿತುಕೊಂಡು ಅವರು ಹೇಳುವದನ್ನು ಸಾವಧಾನಚಿತ್ತದಿಂದ ಕೇಳಬೇಕು. ಅವರ ಕೂಡ ಸುಮ್ಮನೆ ವಾದಿಸಬಾರದು. ಹಾಗೂ ಅವರ ಮುಂದೆ ತಮ್ಮ ಕ್ಷುದ್ರ ವಿಚಾರಗಳನ್ನು ಇಡಬಾರದು.

---

# ೪೭. ಧರ್ಮೋಪದೇಶಕರೂ ವೈದ್ಯರೂ.

ವೈದ್ಯರೊಳಗೆ ಮೂರು ವರ್ಗದವರು ಇರುವಂತೆ ಧರ್ಮೋಪದೇಶಕರೊಳಗೆ ಸಹ ಮೂರು ವರ್ಗದವರು ಇರುತ್ತಾರೆ:- (೧) ಒಂದು ವರ್ಗದ ವೈದ್ಯರು ಕರೆಸಿದ ಕೂಡಲೆ ಬಂದು ರೋಗಿಯನ್ನು ನೋಡಿ, ಅವನ ನಾಡಿಯನ್ನು ಪರೀಕ್ಷಿಸಿ, ಅವನಿಗೆ ಬೇಕಾಗುವ ಔಷಧದ ಯೋಜನೆಯನ್ನು ಹೇಳಿ, ಇಂಥಿಂಥ ಔಷಧದ ಸೇವನ ಮಾಡೆಂದು ಹೇಳುವರು. ಆ ರೋಗಿಯು ಔಷಧವನ್ನು ಸೇವನ ಮಾಡುವದಿಲ್ಲೆಂದು ಹೇಳಿದರೆ ಇವರು ಆ ವಿಷಯದಲ್ಲಿ ಹೆಚ್ಚು ಶ್ರಮವನ್ನು ತೆಗೆದುಕೊಳ್ಳದೆ ತಮ್ಮ ಮನೆಗೆ ಹೊರಟು ಹೋಗುವರು. ಇವರು ಕನಿಷ್ಟ ವರ್ಗದ ವೈದ್ಯರು. ಇವರಂತೆ ಕೆಲವು ಧರ್ಮೋಪದೇಶಕರು ತಮ್ಮ ಉಪದೇಶವನ್ನು ಜನರು ಮನ್ನಿಸಲಿ, ಮನ್ನಿಸದಿರಲಿ ಅಥವಾ ಆ ಪ್ರಕಾರ ವರ್ತಿಸಲಿ, ವರ್ತಿಸದಿರಲಿ ಅದರ ಕಡೆಗೆ ಏನೂ ಲಕ್ಷ್ಯಕೊಡುವದಿಲ್ಲ. (೨) ಎರಡನೇ ವರ್ಗದ ವೈದ್ಯರು ರೋಗಿಗೆ ತಮ್ಮ ಔಷಧವನ್ನು ಸೇವನ ಮಾಡಲಿಕ್ಕೆ ಹೇಳುವದಲ್ಲದೆ ಆ ರೋಗಿಯು ಅದನ್ನು ಸೇವನ ಮಾಡಲಿಕ್ಕೆ ಒಪ್ಪಿಕೊಳ್ಳದಿದ್ದರೆ ಅವನಿಗೆ ಸಿಟ್ಟು ಮಾಡುವರು. ಇದೇ ಪ್ರಕಾರ ಕೆಲವು ಧರ್ಮೋಪದೇಶಕರು ಸೌಮ್ಯರೀತಿಯಿಂದ ಜನರಿಗೆ ಒಡಂಬಡಿಸಿ ಅವರಿಗೆ ಸನ್ಮಾರ್ಗದಿಂದಲೂ ಸತ್ಯತನದಿಂದಲೂ ನಡೆದುಕೊಳ್ಳಲಿಕ್ಕೆ ಯಾವತ್ತು ತರದ ಪ್ರಯತ್ನವನ್ನು ಮಾಡುವರು. ಇವರು ಮೇಲಿನಕಿಂತ ಹೆಚ್ಚಿನ ವರ್ಗದವರು. (೩) ಇನ್ನು ಮೂರನೇ ಮತ್ತು ಶ್ರೇಷ್ಠ ವರ್ಗದ ವೈದ್ಯರು ತಾವು ರೋಗಿಗೆ ಸಿಟ್ಟು ಮಾಡಿದ್ದು ಉಪಯೋಗವಾಗದಿದ್ದರೆ ಆ ರೋಗಿಯ ಎದೆಯ ಮೇಲೆ ಮೊಣಕಾಲು ಊರಿ ಬಲಾತ್ಕಾರವನ್ನು ಉಪಯೋಗಿಸಿ ಅವನಿಗೆ ಔಷಧವನ್ನು ಕುಡಿಸುವರು. ಇವರಂತೆ ಕೆಲವು ಧರ್ಮೋಪದೇಶಕರು ತಮ್ಮ ಶಿಷ್ಯರಿಗೆ ಪರಮೇಶ್ವರನ ಮೇಲೆ ಭಕ್ತಿಯನ್ನಿಟ್ಟು ನಡೆಯಲಿಕ್ಕೆ ಪ್ರಸಂಗ ವಿಶೇಷದಲ್ಲಿ ಬಲಾತ್ಕಾರವನ್ನು ಮಾಡುವರು. ಇವರು ಶ್ರೇಷ್ಠ ವರ್ಗದ ಧರ್ಮೋಪದೇಶಕರು.

---

# ೪೮. ಕಪ್ಪೆಯು ಒದರುವಿಕೆಯೂ ಹಾವಿನ ನರಳುವಿಕೆಯೂ.

ಭಗವಾನರು ಒಂದು ದಿವಸ ಪಂಚವಟಿಯೊಳಗಿಂದ ಹಾದು ಹೋಗುವಾಗ ಒಂದು ಕಪ್ಪೆಯು ಆರ್ತಸ್ವರದಿಂದ ಒದರುವದನ್ನು ಕೇಳಿ ಅವರು ಅದನ್ನು ಒಂದು ಹಾವು ಹಿಡಿದಿದ್ದೀತೆಂದು ತಿಳಕೊಂಡರು. ಮುಂದೆ ಬಹಳ ದಿವಸಗಳಾದ ನಂತರ ಅವರು ಅದೇ ದಾರಿಯಿಂದ ತಿರುಗಿ ಹೋಗುವಾಗ ಮುಂಚಿನಂತೆಯೇ ಆ ಕಪ್ಪೆಯು ಒದರುವದನ್ನು ಕೇಳಿ ಅಲ್ಲಿ ಬೆಳೆದಿದ್ದ ಜುಡುಪುಗಳಲ್ಲಿ ಹಣಕಿ ನೋಡಲು ಒಂದು ನೀರೊಳಗಿನ ಹಾವು ಅದನ್ನು ತನ್ನ ಬಾಯಲ್ಲಿ ಕಚ್ಚಿಕೊಂಡು ಕೂತದ್ದನ್ನು ಕಂಡರು. ಆಗ ಆ ಹಾವು ಆ ಕಪ್ಪೆಯನ್ನು ನುಂಗಲೊಲ್ಲದು ಅಥವಾ ಅದನ್ನು ಹೊರಗೆ ಹೋಗಗೊಡಲೊಲ್ಲದು ಎಂದು ಅವರಿಗೆ ತಿಳಿದು ಬಂತು. ಅದರ ಮೇಲಿಂದ ಅವರು-“ ಈ ಕಪ್ಪೆಯು ಯಾವದಾದರೂ ವಿಷವುಳ್ಳ ಹಾವಿಗೆ ಸಿಕ್ಕಿದ್ದರೆ ಇದು ಮೂರು ಸಾರೆ ಒದರುವದರೊಳಗಾಗಿ ಆ ಹಾವು ಇದನ್ನು ನುಂಗಿ ಬಿಡುತ್ತಿತ್ತು. ಆ ಪ್ರಕಾರ ಈ ಹಾವು ಮಾಡದೆ ಇರುವದರಿಂದ ಈ ಹಾವಿಗಾದರೂ ಈ ಕಪ್ಪೆಯನ್ನು ನುಂಗಲಿಕ್ಕೆ ಆಗದೆ ಇದು ತಾನೂ ಆ ಕಪ್ಪೆಯಂತೆ ದುಃಖದಿಂದ ನರಳುತ್ತಿರುವದು” ಎಂದು ನಿರ್ಣಯ ಮಾಡಿದರು.

## ತಾತ್ಪರ್ಯ.

ಒಬ್ಬ ಅಜ್ಞಾನ ಮನುಷ್ಯನು ಹುಚ್ಚುತನದಿಂದ ಎರಡನೆಯವನನ್ನು ರಕ್ಷಣ ಮಾಡುವ ಹೊಣೆಯನ್ನು ತನ್ನ ಮೇಲೆ ತೆಗೆದುಕೊಂಡರೆ ಇಬ್ಬರ ದುಃಖಕ್ಕೂ ಪಾರವೇ ಇಲ್ಲವೆಂದು ಹೇಳಬಹುದು. ಅಜ್ಞಾನ ಗುರುವಿನಿಂದ ಅವನ ಶಿಷ್ಯನಿಗೆ ಜ್ಞಾನವು ಹುಟ್ಟಿ ಮೋಕ್ಷವು ದೊರಕುವದು ಅಸಾಧ್ಯವು. ಮತ್ತೆ ಆ ಗುರುವಿನ ಅಹಂಕಾರವು ಹೋಗಿ ಅವನಿಂದ ಅಂಗೀಕೃತ ಕಾರ್ಯವು ಸಿದ್ಧಿಗೆ ಹೋಗುವದು ಅಸಾಧ್ಯವು. ಸಮರ್ಥನಾದ ಗುರುವನ್ನು ಕಂಡರೆ ಮಾತ್ರ ಶಿಷ್ಯನ ಅಹಂಭಾವವು ಮೂರುಸಾರೆ ನೀರುಗುಟಕರಿಸುವದರೊಳಗಾಗಿ ವಿನಾಶ ಹೊಂದುವದು.

---

## ೪೯. ಒಬ್ಬ ವ್ಯಾಖ್ಯಾತನ ಅಜ್ಞಾನವು.

ಒಂದು ಸಾರೆ ಒಬ್ಬ ವ್ಯಾಖ್ಯಾತನು ಒಂದು ಧರ್ಮಮಂಡಲದ ಮುಂದೆ ವ್ಯಾಖ್ಯಾನ ಕೊಡುವಾಗ–"ಪರಮೇಶ್ವರನು ಪೂರ್ಣ ರಸವರ್ಜಿತನು ಇರುತ್ತಾನೆ. ಆದುದರಿಂದ ನಾವು ಅವನನ್ನು ನಮ್ಮ ಗುಣಮಾಧುರ್ಯಗಳಿಂದ ರಸಭರಿತನಾಗಿ ಮಾಡತಕ್ಕದ್ದು" ಎಂದು ಹೇಳಿದನು. ವ್ಯಾಖ್ಯಾತನು ಪರಮೇಶ್ವರನ ಪ್ರೇಮ ಸಂತೋಷಾದಿ ಗುಣಗಳ ಸಂಬಂಧವಾಗಿ ಈ ಪ್ರಕಾರ ಸುಳ್ಳು ವಿಧಾನ ಮಾಡಿದ್ದನ್ನು ಕೇಳಿದ ಕೂಡಲೆ ಭಗವಾನರು–"ಒಬ್ಬ ಹುಡುಗನು ತನ್ನ ಸೋದರ ಮಾವನ ಹತ್ತರ ಅನೇಕ ಕುದುರೆಗಳಿರುತ್ತವೆಂದು ಹೇಳಿ ತನ್ನ ಶ್ರೋತೃಗಳಲ್ಲಿ ವಿಶ್ವಾಸ ಹುಟ್ಟಿಸುವದಕ್ಕಾಗಿ ತನ್ನ ಮಾವನು ಆ ಎಲ್ಲ ಕುದುರೆಗಳನ್ನು ದನದ ಹಕ್ಕಿಯಲ್ಲಿ ಕಟ್ಟಿರುತ್ತಾನೆಂದು ಹೇಳಿದ ಕಥೆಯು ನನಗೆ ನೆನಪು ಆಯಿತು" ಎಂದು ಹೇಳಿದರು.

### ತಾತ್ಪರ್ಯ.

ದನದ ಹಕ್ಕಿಯು ಕುದುರೆಗಳನ್ನು ಕಟ್ಟತಕ್ಕ ಸ್ಥಳವಲ್ಲವೆಂಬ ಕಾರಣದಿಂದ ಮೇಲ್ಕಂಡ ಹುಡುಗನು ತನ್ನ ಮಾವನ ಹತ್ತರ ಕುದರೆಗಳಿದ್ದವೆಂದು ಹೇಳಿದಮಾತು ಸುಳ್ಳೆಂದು ಬುದ್ಧಿವಂತರಿಗೆ ಹೇಗೆ ನಿದರ್ಶನಕ್ಕೆ ಬರುವದೋ ಹಾಗೆ ವ್ಯಾಖ್ಯಾತನು ಪರಮೇಶ್ವರನು ರಸವರ್ಜಿತನು ಅಂದರೆ ಆತನಿಗೆ ಪ್ರೇಮ ಸಂತೋಷಾದಿ ಗುಣಗಳು ಇಲ್ಲವೆಂದು ಹೇಳಿದ ಮಾತಿನ ಮೇಲಿಂದ ವ್ಯಾಖ್ಯಾತನಿಗೆ ಪರಮೇಶ್ವರನ ಗುಣಗಳ ಸಂಬಂಧವಾಗಿ ಏನೂ ಗೊತ್ತಿಲ್ಲವೆಂಬುವದು ನಿದರ್ಶನಕ್ಕೆ ಬರುವದು. ಪರಮೇಶ್ವರನು ಪ್ರೇಮ, ಜ್ಞಾನ ಮತ್ತು ಆನಂದ ಇವುಗಳ ಮೂಲ ಸ್ವರೂಪನಿದ್ದು ಅವನಿಗೆ ರಸವರ್ಜಿತನೆಂದು ಹೇಳಿದ ವ್ಯಾಖ್ಯಾತನಿಗೆ ಬುದ್ಧಿವರ್ಜಿತನೆಂದು ಹೇಳಲಿಕ್ಕೆ ಏನೂ ಅಡ್ಡಿಯಿಲ್ಲ.

---

## ೫೦. ಒಬ್ಬ ಸಾಧುವು ರೋಗಿಗೆ ಹೇಳಿದ ಔಷಧವು.

ಒಬ್ಬ ಮನುಷ್ಯನು ತನ್ನ ಬೇನೆಯು ಕೂಸಿಗೆ ಔಷಧವನ್ನು ತರುವ ಸಲುವಾಗಿ ಆದನ್ನು ಬಗಲಲ್ಲಿ ಎತ್ತಿಕೊಂಡು ಒಬ್ಬ ಸಾಧುವಿನ ಕಡೆಗೆ ಹೋ

ದನು. ಆಗ ಆ ಸಾಧುವು ಅವನಿಗೆ " ನಾಳೆ ಬಾ " ಎಂದು ಹೇಳಿದನು. ಆ ಪ್ರಕಾರ ಆ ಮನುಷ್ಯನು ಮರುದಿವಸ ಆ ಸಾಧುವಿನ ಬಳಿಗೆ ತಿರುಗಿ ಹೋಗಲು ಆ ಸಾಧುವು ಅವನಿಗೆ–" ನಿನ್ನ ಕೂಸಿಗೆ ತಿನ್ನಲಿಕ್ಕೆ ಏನೂ ಸೀ ಪದಾರ್ಥ ಕೊಡಬೇಡ, ಅಂದರೆ ಅದು ನೆಟ್ಟಗಾಗುವದು " ಎಂದು ನುಡಿದನು. ಅದಕ್ಕೆ ಆ ಮನುಷ್ಯನು–" ಸ್ವಾಮಿ, ಇದನ್ನು ನಿನ್ನೆಯೇ ಹೇಳಿಬಿಟ್ಟಿದ್ದರೆ ಆಗುತ್ತಿತ್ತು " ಎಂದು ಹೇಳಿದನು. ಇದನ್ನು ಕೇಳಿ ಆ ಸಾಧುವು–" ನಿನ್ನೆ ನನ್ನ ಮುಂದೆ ಸಕ್ಕರಿಯ ರಾಶಿಯು ಬಿದ್ದಿತ್ತು. ನಿನ್ನೆ ನಾನು ಇದನ್ನು ಹೇಳಿದ್ದರೆ ನಿನ್ನ ಕೂಸು ನಾನು ಡಾಂಭಿಕನು ಇರುತ್ತೇನೆಂತಲೂ, ನಾನು ಸ್ವತಃ ಸಕ್ಕರಿಯನ್ನು ಬೇಕಾದಷ್ಟು ತಿನ್ನುತ್ತಿದ್ದು ತನಗೆ ಮಾತ್ರ ತಿನ್ನಬೇಡವೆಂದು ಹೇಳುತ್ತೇನೆಂತಲೂ ತಿಳಿದುಕೊಳ್ಳುತ್ತಿತ್ತು " ಎಂದು ಉತ್ತರ ಕೊಟ್ಟನು.

### ತಾತ್ಪರ್ಯ.

● ಸುಜ್ಞರು ತಮ್ಮ ಮಾತು ಪರಿಣಾಮಕಾರಕವಾಗುವಂತೆ ಕಾಲಸ್ಥಿತಿಗಳನ್ನು ನೋಡಿಕೊಂಡು ಮಾತಾಡುತ್ತಾರೆ. ಅವರು ಎಂದೂ ವ್ಯರ್ಥವಾಗಿ ಮಾತಾಡುವದಿಲ್ಲ.

---

## ೫೧. ಆಲಸ್ಯವು ಮನುಷ್ಯನ ವೈರಿಯು.

ಇಬ್ಬರು ಮನುಷ್ಯರು ಒಂದು ತೋಟಕ್ಕೆ ಹೋಗಿದ್ದರು. ಅವರು ಅಲ್ಲಿಗೆ ಹೋದ ಕೂಡಲೇ ಒಬ್ಬನು ಆ ತೋಟದೊಳಗೆ ಎಷ್ಟು ಮಾವಿನ ಗಿಡಗಳು ಇರುತ್ತವೆ, ಪ್ರತಿಯೊಂದು ಮಾವಿನ ಗಿಡಕ್ಕೆ ಎಷ್ಟು ಕಾಯಿಗಳು ಬಿಡುತ್ತವೆ, ಹಾಗೂ ಇಡೀ ತೋಟದ ಉತ್ಪನ್ನವು ಎಷ್ಟಾಗುವದು ಎಂದು ಲೆಕ್ಕವನ್ನು ಮಾಡುವಲ್ಲಿ ತೊಡಗಿದನು. ಇನ್ನೊಬ್ಬನು ಆ ತೋಟದ ಯಜಮಾನನ ಕಡೆಗೆ ಹೋಗಿ, ಅವನನ್ನು ಮಾತಾಡಿಸಿ, ಅವನ ಗುರುತು ಮಾಡಿಕೊಂಡು ಅವನ ಅಪ್ಪಣೆಯ ಮೇರೆಗೆ ಒಂದು ಮಾವಿನ ಗಿಡದಲ್ಲಿ ಆದ ಪಾಡು ಹಣ್ಣನ್ನು ಹರಿದು ತಿನ್ನಹತ್ತಿದನು. ಈ ಇಬ್ಬರಲ್ಲಿ ಬುದ್ಧಿವಂತರು ಯಾರು?

ಮಾವಿನ ಹಣ್ಣು ತಿನ್ನುವದರಿಂದ ಹಸಿವೆಯಾದರೂ ಶಾಂತವಾಗುವದು. ಬರೀ ಗಿಡಗಳ ಎಲೆಗಳನ್ನಾಗಲೀ ಕಾಯಿಗಳನ್ನಾಗಲೀ ಎಣಿಕೆ ಮಾಡುವದರಿಂದ ಪ್ರಯೋಜನವೇನು? ಬುದ್ಧಿಯ ಅಹಂಕಾರವುಳ್ಳ ಮನುಷ್ಯನು "ದೇವರು ಈ ಸೃಷ್ಟಿಯನ್ನು ಏಕೆ ನಿರ್ಮಿಸಿದನು ಮತ್ತು ಹೇಗೆ ನಿರ್ಮಿಸಿದನು?" ಎಂಬ ವಿಷಯಗಳನ್ನು ವಿಚಾರ ಮಾಡುವಲ್ಲಿ ವೇಳೆಗಳೆಯುತ್ತಾನೆ. ಆದರೆ ತನ್ನ ಬುದ್ಧಿಯ ಅಹಂಕಾರ ರಹಿತನಾದ ನಮ್ರ ಮನುಷ್ಯನು ಪರಮೇಶ್ವರನ ಬಗ್ಗೆ ಜ್ಞಾನವನ್ನು ಮಾಡಿಕೊಂಡು ಜಗತ್ತಿನಲ್ಲಿ ಶ್ರೇಷ್ಠತರವಾದ ಆನಂದವನ್ನು ಅನುಭೋಗಿಸುತ್ತಾನೆ.

### ತಾತ್ಪರ್ಯ.

ನಾವು ವ್ಯರ್ಥವಾಗಿ ಎಂದೂ ವೇಳೆಯನ್ನು ಕಳೆಯಬಾರದು. ನಮ್ಮ ಆಯುಷ್ಯವು ನೂರು ವರ್ಷಗಳೆಂದು ತಿಳಿದುಕೊಂಡರೂ, ನಮ್ಮ ಅರ್ಧ ಆಯುಷ್ಯವು ರಾತ್ರಿಯೊಳಗೆ ನಿದ್ರೆ ಮಾಡುವಲ್ಲಿ ಹೋಗುತ್ತದೆ. ಮಿಕ್ಕದ್ದರಲ್ಲಿ ಕೆಲವು ವರ್ಷಗಳು ರೋಗಗಳಿಂದ ನರಳುವದರಲ್ಲಿ ಹೋಗುತ್ತವೆ. ಕೆಲವು ವರ್ಷಗಳು ನಮ್ಮ ಹುಡುಗತನದ ಅಜ್ಞಾನಾವಸ್ಥೆಯಲ್ಲಿ ಹೋಗುತ್ತವೆ. ಕೆಲವು ವರ್ಷಗಳು ನಮ್ಮ ಮುಪ್ಪಿನಲ್ಲಿಯೂ ಪರಾವಲಂಬನೆಯಲ್ಲಿಯೂ ಹೋಗುತ್ತವೆ. ಈ ಪ್ರಕಾರ ವರ್ಷಗಳು ಕಳೆದ ನಂತರ ನಮ್ಮ ಆಯುಷ್ಯವು ಅತ್ಯಲ್ಪವೇ ಉಳಿಯುವದು. ಆದುದರಿಂದ ನಾವು ಯಾವಾಗಲು ಜ್ಞಾನ ಸಂಪಾದನ ಮಾಡುವಲ್ಲಿಯೂ, ಜನರಿಗೆ ಉಪಕಾರ ಮಾಡುವಲ್ಲಿಯೂ, ಪರಮೇಶ್ವರನ ಭಕ್ತಿಯಲ್ಲಿಯೂ, ನಮ್ಮ ವೇಳೆಯ ಉಪಯೋಗವನ್ನು ಮಾಡತಕ್ಕದ್ದು. ಆಲಸ್ಯವು ಮನುಷ್ಯನ ಪ್ರಬಲವಾದ ವೈರಿಯು. ಭರ್ತೃಹರಿಯು ಹೇಳುವದೇನಂದರೆ:--

**ಅಲಸ್ಯಂ ಹಿ ಮನುಷ್ಯಾಣಾಂ ಶರೀರಸ್ಥೋ ಮಹಾ ರಿಪುಃ ।**

---

## ೩೨. ಒಬ್ಬ ಒಕ್ಕಲಿಗನ ದೃಢನಿಶ್ಚಯವು.

ಒಂದು ಸಾರೆ ಒಂದು ಊರಲ್ಲಿ ಮಳೆಯು ತಕ್ಕ ಹೊತ್ತಿನಲ್ಲಿ ಬೀಳದೆ ಇದ್ದುದರಿಂದ ಅಲ್ಲಿಯ ಒಕ್ಕಲಿಗರು ತಮ್ಮ ಬೆಳೆಗಳು ಒಣಗುವವೆಂದು ಬಹಳ

ಚಿಂತೆ ಮಾಡುತ್ತ ಒಂದು ದಿನ ತಮ್ಮ ಹೊಲಗಳಲ್ಲಿ ಕಾಲಿವೆಗಳನ್ನು ಮಾಡಿಕೊಂಡು ನದಿಯ ನೀರನ್ನು ತಿರುವಿ ಕೊಳ್ಳುವ ಕೆಲಸದಲ್ಲಿ ತೊಡಗಿದ್ದರು. ಒಬ್ಬ ಒಕ್ಕಲಿಗನು ಆ ದಿನ ಸಂಜೆಯಾಗುವದರೊಳಗಾಗಿ ಕಾಲಿವೆ ಕಡಿಯುವದನ್ನು ಮುಗಿಸಬೇಕೆಂಬ ನಿಶ್ಚಯದಿಂದ ತನ್ನ ಕೆಲಸವನ್ನು ನಡೆಸಿದ್ದನು. ಮಧ್ಯಾಹ್ನದ ಹೊತ್ತು ಆದರೂ ಅವನು ಊಟಕ್ಕೆ ಸಹ ಕೆಲಸವನ್ನು ಬಿಟ್ಟಿದ್ದಿಲ್ಲ. ಆಗ ಅವನ ಹೆಂಡತಿಯು ತನ್ನ ಮಗಳ ಕಡೆಯಿಂದ ಅವನಿಗೆ ಎಣ್ಣೆಯ ಬಟ್ಟಲವನ್ನು ಕಳುಹಿಸಿಕೊಟ್ಟಳು. ತಾಯಿಯ ಅಪ್ಪಣೆಯ ಪ್ರಕಾರ ಮಗಳು ತನ್ನ ತಂದೆಯ ಕಡೆಗೆ ಹೋಗಿ—“ ಅಪ್ಪಾ, ಬಹಳ ಹೊತ್ತಾಯಿತು. ಈ ಎಣ್ಣೆಯನ್ನು ಹಚ್ಚಿಕೊಂಡು ನದಿಯಲ್ಲಿ ಜಳಕ ಮಾಡಿ ಊಟಕ್ಕೆ ನಡೆ” ಎಂದು ಅವನಿಗೆ ಹೇಳಿದಳು. ಆಗ ಅವನು–“ ಮಗುವೇ, ನಾನು ಬರಲಾರೆನು. ನನಗೆ ಇನ್ನೂ ಕೆಲಸವು ಬಹಳವದೆ” ಎಂದು ಉತ್ತರಕೊಟ್ಟನು. ಮಧ್ಯಾಹ್ನದ ಎರಡು ಘಂಟೆಯಾದರೂ ಅವನಿಗೆ ಜಳಕ ಮಾಡುವ ಅಥವಾ ಊಟ ಮಾಡುವ ವಿಚಾರವು ಬರಲಿಲ್ಲ. ಮಧ್ಯಾಹ್ನ ೨ ಘಂಟೆಯಾದರೂ ಗಂಡನು ಮನೆಗೆ ಬಾರದೆ ಇದ್ದದ್ದನ್ನು ಕಂಡು ಅವನ ಹೆಂಡತಿಯು ಅವನನ್ನು ಕರೆಯಲಿಕ್ಕೆ ಹೊಲಕ್ಕೆ ಬಂದು– “ ಇನ್ನೂ ನೀವು ಏಕೆ ಜಳಕವನ್ನು ಮಾಡಲಿಲ್ಲ ? ಮನೆಯಲ್ಲಿ ಮಾಡಿದ ಅಡಿಗೆಯು ಆರಿ ಹೋಯಿತು. ನೀವು ಯಾವದಾದರೂ ಅತಿ ಮಾಡುತ್ತೀರಿ. ದಯಮಾಡಿ ಇನ್ನು ಮನೆಗೆ ನಡೆಯಿರಿ. ಉಳಿದ ಕೆಲಸ ನಾಳೆ ಮಾಡಿದರೆ ಆದೀತು. ಅಥವಾ ಊಟ ತೀರಿಸಿಕೊಂಡ ಬಳಿಕ ಮಾಡಿದರೆ ಬಂದೀತು ” ಎಂದು ಹೇಳಿದಳು. ಇದರಿಂದ ಆ ಮನುಷ್ಯನು ಹುಚ್ಚನಂತೆ ಸಿಟ್ಟಿಗೆದ್ದು ತನ್ನ ಹೆಂಡತಿಯನ್ನು ಬೈಯ್ಯಲಿಕ್ಕೆ ಹತ್ತಿದನು. ಅವನು ಬೈದದ್ದೇನಂದರೆ—“ ಹುಚ್ಚೀ, ಮಳೆಯು ಇಲ್ಲದ್ದರಿಂದ ನಾವೆಲ್ಲರೂ ಉಪವಾಸ ಸಾಯಬೇಕಾದೀತು. ನಾನು ಇವತ್ತಿನ ದಿವಸ ಹೇಗಾದರೂ ಮಾಡಿ ಸಂಜೆಯಾಗುವದರೊಳಗಾಗಿ ಹೊಲದಲ್ಲಿ ನದಿಯ ನೀರು ಬರುವಂತೆ ಕಾಲಿವೆಯನ್ನು ಕಡಿದು ಮುಗಿಸಬೇಕೆಂದು ನಿಶ್ಚಯ ಮಾಡಿರುತ್ತೇನೆ” ಇದನ್ನು ಕೇಳಿ ಅವನ ಹೆಂಡತಿಯು ಸುಮ್ಮನೆ ಮನೆಗೆ ಹೊರಟು ಹೋದಳು. ಆ ಮೇಲೆ ಅವನು ಸಂಜೆಯ ತನಕ ಬಿಟ್ಟೂ ಬಿಡದೆ ಕೆಲಸ ಮಾಡಲು ಕಾಲಿವೆ ಕಡಿಯುವ ಕೆಲಸವು ಮುಗಿದು ಅವನ ಹೊಲಕ್ಕೆ ನದಿ

ಯ ನೀರು ಬರಲಿಕ್ಕೆ ಹತ್ತಲಾಗಿ ಅವನು ಬಹು ಹಿಗ್ಗಿದನು. ಹಿಂದುಗಡೆ ಅವನು ತನ್ನ ಮನೆಗೆ ಬಂದು ತನ್ನ ಮೈಗೆಲ್ಲ ಎಣ್ಣೆಯನ್ನು ಹಚ್ಚಿ ಎರಕೊಂಡು ಊಟ ಮಾಡಿ ಗಡದು ಮಲಕೊಂಡು ಬಿಟ್ಟನು.

ಇನ್ನೊಬ್ಬ ಒಕ್ಕಲಿಗನು ಇಂಥ ಕೆಲಸ ಮಾಡುತ್ತಿದ್ದಾಗ ಅವನ ಹೆಂಡತಿಯು ಊಟಕ್ಕೆ ಕರೆಯುವದಕ್ಕಾಗಿ ಬರಲು ಒಲ್ಲೆ ಎಂದು ಉತ್ತರ ಕೊಡದೆ ಅಥವಾ ಯಾವ ರೀತಿಯಿಂದಲೂ ಅವಳ ಮನಸ್ಸನ್ನು ಅಸ್ವಮಾಧಾನ ಮಾಡದೆ ಹೆಗಲ ಮೇಲೆ ಗುದ್ದಲಿ ಸಲಕಿಗಳನ್ನು ಹೊತ್ತುಕೊಂಡು ತನ್ನ ಹೆಂಡತಿಯು ಬೆನ್ನುಹತ್ತಿ ಮನೆಗೆ ಹೊರಟು ಹೋದನು. ಆದುದರಿಂದ ಅವನಿಗೆ ತನ್ನ ಹೊಲಕ್ಕೆ ನದಿಯ ನೀರು ತಿರುವಿಕೊಳ್ಳುವ ಕೆಲಸವು ಆಗದೆ ಅವನ ಬೆಳೆಯು ಒಣಗಿ ಹೋಯಿತು.

## ತಾತ್ಪರ್ಯ.

ಮೋಕ್ಷವು ಪ್ರಾಪ್ತಿಯಾಗಬೇಕಾದರೆ ಪರಮೇಶ್ವರನನ್ನು ದೃಢನಿಶ್ಚಯದಿಂದ ಹುಡುಕಬೇಕಾಗುತ್ತದೆ. “ನಾಳೆ ಮಾಡೋಣ” “ನಾಡದು ಮಾಡೋಣ” ಎಂದು ವಿಲಂಬ ಮಾಡಿದರೆ ಮೋಕ್ಷಪ್ರಾಪ್ತಿಯು ಎಂದೂ ಆಗುವದಿಲ್ಲ. ಮೋಕ್ಷವನ್ನು ದೊರಕಿಸುವ ಮನಸ್ಸುಳ್ಳವನು ಪರಮೇಶ್ವರನ ಹೊರತಾಗಿ ಯಾರ ವಿಚಾರವನ್ನೂ ಮಾಡಬಾರದು. “ಹೊಲಕ್ಕೆ ನೀರು ತಿರುವಿಕೊಳ್ಳದೆ ಬಾಯಿಯಲ್ಲಿ ಅನ್ನದ ತುತ್ತು ಹಾಕಲಿಕ್ಕಿಲ್ಲ” ಎಂದು ದೃಢನಿಶ್ಚಯದಿಂದ ಕೆಲಸ ಮಾಡಿದ ಒಕ್ಕಲಿಗನ ಪ್ರಕಾರ ಎಲ್ಲರು ಪರಮೇಶ್ವರನ ಪ್ರಾಪ್ತಿಯ ಸಲುವಾಗಿ ಕಷ್ಟಪಡತಕ್ಕದ್ದು.

---

## ೫೩. ಅಂತಃಕರಣವೇ ದೇವರ ಗುಡಿಯು.

ಒಂದಾನೊಂದು ಹಳ್ಳಿಯಲ್ಲಿ ಒಂದು ಹಳೇ ಮುರುಕ ಗುಡಿಯು ಇದ್ದು ಅದರಲ್ಲಿಯ ದೇವರ ಮೂರ್ತಿಯನ್ನು ಯಾರೋ ಒಯ್ದು ಬಿಟ್ಟದ್ದರಿಂದ ಆ ಗುಡಿಯು ಪಕ್ಷಿಗಳಿಗೂ ಕಣ್ಣುಕಪ್ಪಡಿಗಳಿಗೂ ಯಾವಾಗಲು ಬಂದು ಕೂಡ್ರುವ ಸ್ಥಳವಾಗಿತ್ತು. ಒಂದು ದಿವಸ ರಾತ್ರಿಯಾಗಲಾಗಿ ಆ ಗುಡಿಯೊಳಗೆ ಗಂಟೆ

ಜಾಗಟೆಗಳನ್ನು ಬಾರಿಸುವ ಸಪ್ಪಳವೂ, ಶಂಖ ಊದುವ ಸಪ್ಪಳವೂ ಕೇಳಿಸ ಲಾಗಿ ಊರ ಜನರೆಲ್ಲರು ಆಶ್ಚರ್ಯಚಕಿತರಾದರು. ಇದರಿಂದ ಊರೊಳಗಿನ ಎಲ್ಲ ಗಂಡಸರು, ಹೆಂಗಸರು, ಹುಡುಗರು ಗುಡಿಯೊಳಗೆ ಯಾವನಾದರೂ ಭಕ್ತ ನು ದೇವರ ಮೂರ್ತಿಯನ್ನು ಪುನಃ ಪ್ರತಿಷ್ಠಾಪನ ಮಾಡಿ ದೇವರ ಆರುತಿಯ ನ್ನು ಮಾಡುತ್ತಿರಬಹುದೆಂದು ತಿಳಿಕೊಂಡು ಆ ಗುಡಿಗೆ ಬಂದು ತಮ್ಮ ಎರಡೂ ಕೈಗಳನ್ನು ಮುಗಿದುಕೊಂಡು ಈ ಸಪ್ಪಳಗಳನ್ನು ಕೇಳುತ್ತ ಅದರ ಮುಂದೆ ನಿಂತರು. ಅವರಲ್ಲಿ ಒಬ್ಬನು ಎಲ್ಲರಿಗಿಂತ ಹೆಚ್ಚು ಕೌತುಕದಿಂದ ಆ ಗುಡಿಯೊ ಳಗೆ ಹೋಗಿ ಹಣಿಕಿ ನೋಡಲು ಒಬ್ಬ ಚೇಷ್ಟೆಗಾರ ಹುಡುಗನು ಗಂಟೆ ಬಾರಿ ಸುವದನ್ನೂ ಶಂಖ ಊದುವದನ್ನೂ ಕಂಡನು! ಆ ಗುಡಿಯಲ್ಲಿ ಪೂಜೆ ಮಾಡ ಲಿಕ್ಕೆ ದೇವರ ಮೂರ್ತಿಯು ಇದ್ದಿಲ್ಲವಷ್ಟೇ ಅಲ್ಲ, ಅದರ ನೆಲವನ್ನು ಸಹ ಯಾರೂ ಉಡುಗಿದ್ದಿಲ್ಲ. ಅದರಲ್ಲಿ ಮೊದಲಿನಂತೆಯೇ ಕಸವು ತುಂಬಿತ್ತು! ಆಗ ಅವನು-"ಎಲೋ ಪೋರನೇ, ಗುಡಿಯಲ್ಲಿ ದೇವರ ಮೂರ್ತಿಯು ಇಲ್ಲ! ನೀನು ಈ ಗುಡಿಯ ಕಸವನ್ನು ಸಹ ಉಡುಗಿ ಸ್ವಚ್ಛ ಮಾಡಿಲ್ಲ! ಹೀಗಿದ್ದು ನೀನು ಶಂಖವನ್ನು ಊದಿ ಈ ಗದ್ದಲವನ್ನು ಏಕೆ ನಡೆಸಿರುವೆ?" ಎಂದು ಕೇಳಿದನು.

## ತಾತ್ಪರ್ಯ.

ನಾವು ಮೊದಲಿಗೆ ನಮ್ಮ ಅಂತಃಕರಣವೆಂಬ ಗುಡಿಯೊಳಗಿನ ದೇವರ ಒಗ್ಗೆ ಜ್ಞಾನವನ್ನು ಮಾಡಿಕೊಳ್ಳಬೇಕು. ಇದಕ್ಕೋಸ್ಕರ ನಾವು ನಮ್ಮ ಪಂ ಚೇಂದ್ರಿಯಗಳಿಂದ ಹುಟ್ಟುವ ವಿಷಯವಾಸನೆಗಳನ್ನು ತೆಗೆದು ಹಾಕಬೇಕು. ಆ ಮೇಲೆ ನಮಗೆ ಅಗತ್ಯವು ತೋರಿದರೆ ಶಂಖವನ್ನು ಊದಿ ಜನರನ್ನು ನಮ್ಮ ಹತ್ತರ ಕರೆಯಿಸಿ ಅವರಿಗೆ ಧರ್ಮೋಪದೇಶ ಮಾಡಬೇಕು. ಎರಡನೆಯವರಿಗೆ ಧರ್ಮೋಪದೇಶ ಮಾಡುವ ಕೆಲಸವು ಬಹಳ ಬಿರಿಯಾದದ್ದು. ಯಾರು ದೇವ ರನ್ನು ಜ್ಞಾನದೃಷ್ಟಿಯಿಂದ ತಿಳಿದುಕೊಳ್ಳುತ್ತಾರೋ ಅವರಿಗೆ ದೇವರು ತನ್ನ ಆಜ್ಞೆಗಳನ್ನು ತಿಳಿಸುತ್ತಾನೆ. ಅಂಥವರೇ ಎರಡನೇಯವರಿಗೆ ಉಪದೇಶ ಮಾಡ ಲಿಕ್ಕೆ ಅಧಿಕಾರಿಗಳಾಗುವರು.

# ೫೪. ಎಷ್ಟು ಮಂದಿ ಸೂರ್ಯರು?

ಒಂದು ದಿವಸ ಶ್ರೀರಾಮಕೃಷ್ಣ ಪರಮಹಂಸರು ಒಬ್ಬಾನೊಬ್ಬ ಭಕ್ತನ ಕೂಡ ಕೆಳಗೆ ಬರೆದ ಪ್ರಕಾರ ಸಂಭಾಷಣೆ ಮಾಡಿದರು:—

**ಪರಮಹಂಸರು**—ಇಲ್ಲಿ ನಿನ್ನ ಮುಂದೆ ನೀರು ತುಂಬಿದ ಹತ್ತು ಕೊಡಗಳನ್ನು ಇಟ್ಟಿದ್ದು ಆ ಪ್ರತಿಯೊಂದು ಕೊಡದಲ್ಲಿ ಸೂರ್ಯನ ಪ್ರತಿಬಿಂಬವು ಮೂಡಿರುತ್ತದೆಂದು ತಿಳಿದುಕೋ. ಅಂದಮೇಲೆ ನಿನ್ನ ಕಣ್ಣಿಗೆ ಎಷ್ಟು ಮಂದಿ ಸೂರ್ಯರು ಕಾಣುವರು?

**ಒಬ್ಬ ಭಕ್ತ**—ಸೂರ್ಯನ ಹತ್ತು ಪ್ರತಿಬಿಂಬಗಳು ಹಾಗೂ ಒಬ್ಬ ನಿಜವಾದ ಸೂರ್ಯನು.

**ಪರಮಹಂಸರು**—ನೀನು ಒಂದು ಕೊಡವನ್ನು ಒಡಿದೆಯೆಂದು ತಿಳಿದುಕೋ. ಆಗ ಎಷ್ಟು ಮಂದಿ ಸೂರ್ಯರು ಕಾಣಿಸುವರು?

**ಒಬ್ಬ ಭಕ್ತ**—ಒಂಬತ್ತು ಸೂರ್ಯನ ಪ್ರತಿಬಿಂಬಗಳು ಹಾಗೂ ಒಬ್ಬ ನಿಜವಾದ ಸೂರ್ಯನು.

**ಪರಮಹಂಸರು**—ಈಗ ಒಂಬತ್ತು ಕೊಡಗಳನ್ನು ಒಡಿದೆಯೆಂದು ತಿಳಿದುಕೋ. ಎಷ್ಟು ಮಂದಿ ಸೂರ್ಯರು ಕಾಣಿಸುವರು?

**ಒಬ್ಬ ಭಕ್ತ**— ಸೂರ್ಯನ ಒಂದು ಪ್ರತಿಬಿಂಬವು ಹಾಗೂ ಒಬ್ಬ ನಿಜವಾದ ಸೂರ್ಯನು.

**ಪರಮಹಂಸರು**—ಕಡೇ ಕೊಡವು ಒಡೆದ ಮೇಲೆ ಏನು ಉಳಿಯುತ್ತದೆ?

**ಒಬ್ಬ ಭಕ್ತ**—ನಿಜವಾದ ಸೂರ್ಯನು.

**ಪರಮಹಂಸರು**—ಹಾಗಲ್ಲ. ಏನು ಉಳಿಯಿತೆಂಬುವದನ್ನು ಶಬ್ದಗಳಿಂದ ಹೇಳಲಿಕ್ಕಾಗುವದಿಲ್ಲ. ಏನು ಉಳಿಯುವದೋ ಉಳಿಯುವದು! ಸೂರ್ಯನ ಪ್ರತಿಬಿಂಬವು ಕಾಣಿಸದಿದ್ದರೆ ನಿಜವಾದ ಸೂರ್ಯನು ಇರುತ್ತಾನೆಂದು ಹೇಗೆ ತಿಳಿದುಕೊಳ್ಳುವಿ? ಸಮಾಧಿಯು ಹತ್ತಿತೆಂದರೆ ಪ್ರಜ್ಞೆಯು ಹೊರಟು

ಹೋಗುತ್ತದೆ. ಸಮಾಧಿಯು ಹತ್ತಿದ ಬಳಿಕ ಏನಾಯಿತೆಂಬುವದನ್ನು ಪ್ರಜ್ಞೆಯೆಂಬ ಕೆಳಗಿನ ಕ್ಷೇತ್ರಕ್ಕೆ ಬಂದ ಮನುಷ್ಯನು ಶಬ್ದಗಳಿಂದ ಹೇಳುವದು ಅಸಾಧ್ಯವು.

---

## ೫೫. ಆಶೆಗಳ ಮನೋರಾಜ್ಯವು.

ಜೂನ ತಿಂಗಳದಲ್ಲಿ ಒಂದು ದಿವಸ ಮುಂಜಾನೆ ಒಂದು ಕುರಿಮರಿಯು ತನ್ನ ತಾಯಿಯ ಹತ್ತರ ಆಡುತ್ತಿದ್ದಾಗ ಬಹಳ ಆನಂದದಿಂದ--"ಅವ್ವಾ, ನವ್ಹಂಬರ ತಿಂಗಳದಲ್ಲಿ ತರತರದ ಸುವಾಸನೆಯ ಹೂವುಗಳನ್ನು ತಂದು ಮೇಜವಾನಿಯನ್ನು ಮಾಡೋಣ" ಎಂದು ಹೇಳಿತು. ಆಗ ಆ ಕುರಿಯು-"ಮಗುವೇ, ಆ ಮೇಜವಾನಿಯು ನೀನು ತಿಳಕೊಂಡಷ್ಟು ಸುಲಭವಾಗಿರುವದಿಲ್ಲ. ಆ ಮೇಜವಾನಿಯ ಕಾಲವು ಬರುವದರೊಳಗಾಗಿ ನೀನು ನಿನ್ನ ಜೀವದ ಮೇಲಿನ ಎಷ್ಟೋ ಗಂಡಾಂತರಗಳನ್ನು ಕಳೆಯಬೇಕಾಗುವದು. ಸಪ್ಟಂಬರ ಮತ್ತು ಆಕ್ಟೋಬರ ತಿಂಗಳುಗಳ ನಡುವಿನ ಕಾಲವು ನಿನಗೆ ಬಹಳ ಅಶುಭವಾದದ್ದು. ನಿನಗೆ ಕೆಲವರು ದುರ್ಗಾದೇವತೆಗೆ ಬಲಿ ಕೊಡಲಿಕ್ಕೆ ಒಯ್ಯಬಹುದು. ಅದೂ ತಪ್ಪಿದರೆ ಕಾಳಿಕಾದೇವಿಯ ಪೂಜೆಗಾಗಿ ನಿನ್ನನ್ನು ಒಯ್ಯುವರು. ಆಗ ಸುದೈವದಿಂದ ನೀನು ಬದುಕಿದರೆ ಜಗದ್ಧಾತ್ರಿ ಪೂಜೆಯು ಬರುವದು. ಆಗಂತೂ ನಮ್ಮ ವಂಶದ ಯಾವತ್ತು ಗಂಡು ಜಾತಿಯನ್ನು ಬಲಿಕೊಡುವರು. ಇವೆಲ್ಲ ಗಂಡಾಂತರಗಳಿಂದ ನೀನು ಬದುಕಿದ ತರುವಾಯ ನವ್ಹಂಬರ ತಿಂಗಳದ ಪ್ರಾರಂಭಕ್ಕೆ ಮೇಜವಾನಿಯ ಬಗ್ಗೆ ವಿಚಾರ ಮಾಡು" ಎಂದು ಉತ್ತರ ಕೊಟ್ಟಿತು.

### ತಾತ್ಪರ್ಯ.

ನಾವು ನಮ್ಮ ತಾರುಣ್ಯದಲ್ಲಿ "ಮುಂದೆ ಈ ಪ್ರಕಾರ ಮಾಡೋಣ, ಆ ಪ್ರಕಾರ ಮಾಡೋಣ" ಎಂದು ಮನೋರಾಜ್ಯದ ಆಶೆಗಳನ್ನು ಮಾಡಬಾರದು ನಮ್ಮ ಜೀವಕ್ಕೆ ಮುಂದೆ ಎಷ್ಟೆಷ್ಟು ಸಂಕಟಗಳು ಬರುತ್ತವೆಂಬದನ್ನು ಯಾರಿಗೂ ಹೇಳಲಿಕ್ಕಾಗದು.

---

# ೫೬. ಯಮುನಾನದಿಗೆ ವ್ಯಾಸಋಷಿಯ ಪ್ರಾರ್ಥನೆ.

ವ್ಯಾಸಋಷಿಯು ಒಂದು ದಿವಸ ಯಮುನಾನದಿಯನ್ನು ದಾಟಿ ಹೋಗತಕ್ಕವನಿದ್ದನು. ಆ ಹೊತ್ತಿಗೆ ಕೆಲವು ಗೋಪಿಕಾ ಸ್ತ್ರೀಯರು ಅಲ್ಲಿ ಬಂದರು. ಅವರಿಗೂ ನದಿಯನ್ನು ದಾಟಿ ಹೋಗತಕ್ಕದ್ದಿತ್ತು. ಆದರೆ ಅಲ್ಲಿ ಹರಗೋಲು ಇದ್ದಿಲ್ಲ. ಆಗ ಆ ಗೋಪಿಕಾ ಸ್ತ್ರೀಯರು ವ್ಯಾಸಋಷಿಗೆ-"ಸ್ವಾಮಿಗಳೇ, ನಾವು ಈ ನದಿಯನ್ನು ಇನ್ನು ದಾಟುವದು ಹೇಗೆ?" ಎಂದು ಕೇಳಿದರು. ಅದಕ್ಕೆ ವ್ಯಾಸಋಷಿಯು-"ನಾನು ಬಹಳ ಹಸಿದಿದ್ದೇನೆ. ನನಗೆ ಏನಾದರೂ ತಿನ್ನಲಿಕ್ಕೆ ಕೊಡುತ್ತೀರೋ?" ಎಂದು ಕೇಳಿದನು. ಆಗ ಆ ಗೋಪಿಕಾ ಸ್ತ್ರೀಯರು ಆ ಮಹಾನುಭಾವನಿಗೆ ಹಾಲು, ಕೆನೆಮೊಸರು, ಬೆಣ್ಣೆಗಳನ್ನು ಕೊಟ್ಟರು. ಅವನು ಅವುಗಳಿಂದ ತನ್ನ ಕ್ಷುಧೆಯನ್ನು ಶಾಂತಪಡಿಸಿಕೊಂಡನು. ಆ ಮೇಲೆ ಆ ಗೋಪಿಕಾ ಸ್ತ್ರೀಯರು ವ್ಯಾಸಋಷಿಗೆ-"ಇನ್ನು ನಾವು ನದಿಯನ್ನು ದಾಟುವ ಮಾರ್ಗವು ಯಾವದು?" ಎಂದು ಕೇಳಲಾಗಿ ಅವನು ಯಮುನಾನದಿಯ ದಂಡೆಯ ಮೇಲೆ ನಿಂತು-"ಎಲೈ ಯಮುನಾದೇವಿಯೇ, ನಾನು ಇವತ್ತಿನ ದಿವಸ ಏನೂ ತಿನ್ನದೆ ಇದ್ದದ್ದಾದರೆ ನೀನು ಇಬ್ಭಾಗವಾಗಿ ನಮಗೆ ಹಾದು ಹೋಗಲಿಕ್ಕೆ ನಿನ್ನ ನಡುವೆ ದಾರಿಯನ್ನು ಕೊಡು. ಅಂದರೆ ನಾವು ಆಚೆಯ ದಂಡೆಗೆ ಹೋಗುವೆವು" ಎಂದು ಯಮುನೆಯನ್ನು ಪ್ರಾರ್ಥಿಸಿದನು. ಆ ಮೇಲೆ ಯಮುನೆಯು ಅದರಂತೆ ದಾರಿಯನ್ನು ಕೊಟ್ಟಳು. ಇದನ್ನು ನೋಡಿ ಆ ಗೋಪಿಕಾ ಸ್ತ್ರೀಯರು ಆಶ್ಚರ್ಯಪಟ್ಟು--"ಈ ಋಷಿಯು ನಮ್ಮ ಕಣ್ಣ ಮುಂದೆ ನಾವು ಕೊಟ್ಟ ಹಾಲು ಮೊಸರು ಬೆಣ್ಣೆಗಳನ್ನು ಯಥಾಸ್ಥಿತವಾಗಿ ತಿಂದು ತಾನೇನೂ ತಿಂದಿಲ್ಲವೆಂದು ಹೇಳಿದನಲ್ಲಾ!" ಎಂದು ತಮ್ಮ ತಮ್ಮೊಳಗೆ ಗುಜುಗುಜು ಮಾತನಾಡಿದರು.

## ತಾತ್ಪರ್ಯ.

ವ್ಯಾಸಋಷಿಗೆ ತಾನು ತಿನ್ನುವದಿಲ್ಲವೆಂತಲೂ ತನ್ನ ಅಂತಃಕರಣದಲ್ಲಿ ವಾಸಿಸುವ ಪರಮೇಶ್ವರನು ನಿಜವಾಗಿ ತಿನ್ನುತ್ತಾನೆಂತಲೂ ಇದ್ದ ದೃಢ ವಿ

ಶ್ವಾಸವು ಸಾಕ್ಷಾತ್ಕಾರವಾಯಿತೆಂಬುವದು ಆ ಗೋಪಿಕಾ ಸ್ತ್ರೀಯರಿಗೆ ತಿಳಿಯು ಲಿಲ್ಲ. ಸಾಧನಗಳು ಪರಮೇಶ್ವರನ ಜ್ಞಾನವನ್ನು ಮಾಡಿಕೊಳ್ಳುವದಕ್ಕೆ ಅತ್ಯಂತ ಅವಶ್ಯವಿರುತ್ತವೆ. ಆದರೆ ಪೂರ್ಣ ವಿಶ್ವಾಸವಿದ್ದವರಿಗೆ ಸ್ವಲ್ಪ ಸಾಧನವಾದರೂ ಸಾಕಾಗುವದು.

---

## ೫೭. ಪರಮೇಶ್ವರನು ಕಲ್ಪವೃಕ್ಷವು.

ಒಬ್ಬ ದಾರಿಕಾರನು ಒಮ್ಮೆ ಬಹಳ ದಾರಿಯನ್ನು ನಡೆದು ದಣಿದ ಕಾರಣ ಒಂದು ಕಲ್ಪವೃಕ್ಷದ ನೆರಳಿನ ಕೆಳಗೆ ಕುಳಿತನು. ಆಗ ಅವನು ತನಗೆ ಉಣ್ಣಲಿಕ್ಕೆ ಮೃಷ್ಟಾನ್ನವೂ, ಕುಡಿಯಲಿಕ್ಕೆ ಶೀತಲೋದಕವೂ ದೊರೆಯಬೇಕೆಂದು ಅಪೇಕ್ಷಿಸಿದನು. ಆಗಲೇ ಅವನ ಮುಂದೆ ಇವೆಲ್ಲ ತಂದು ಇಡಲ್ಪಟ್ಟವು. ಆಗ ಅವನು ಇವುಗಳನ್ನು ಉಂಡು ಕುಡಿದು ಶಾಂತನಾದ ತರುವಾಯು--
ನನಗೆ ಈ ಹೊತ್ತಿನಲ್ಲಿ ಒಬ್ಬ ಸುಂದರ ತರುಣಿಯು ಪ್ರಾಪ್ತಳಾದರೆ ಎಷ್ಟು ಸೌಖ್ಯವಾದೀತು ?" ಎಂದು ತನ್ನ ಮನಸ್ಸಿನಲ್ಲಿ ವಿಚಾರಮಾಡಿದನು. ಕೂಡಲೇ ಅವನ ಮುಂದೆ ಒಬ್ಬ ಸುಂದರ ತರುಣಿಯು ಬಂದು ನಿಂತಳು. ಆ ಮೇಲೆ ಅವನು ಅವಳ ಕೂಡ ಆನಂದದಿಂದ ಮಾತಾಡುತ್ತಿರುವಾಗ-" ಈಗ ಒಂದು ಹುಲಿಯು ಬಂದು ನನ್ನನ್ನು ತಿಂದಿತೆಂದು ತಿಳಿಯೋಣ " ಎಂದು ತನ್ನ ಮನಸ್ಸಿನಲ್ಲಿ ವಿಚಾರ ಮಾಡಿದನು. ಕೂಡಲೇ ಒಂದು ಹುಲಿಯು ಅಲ್ಲಿಗೆ ಬಂದು ಅವನನ್ನು ತಿಂದು ಬಿಟ್ಟಿತು.

### ತಾತ್ಪರ್ಯ.

ದೇವರು ಕಲ್ಪವೃಕ್ಷದಂತೆ ಇರುತ್ತಾನೆ. ಯಾವನು ಅವನ ಮುಂದೆ ತಾನು ನಿರ್ಬಲನೂ ಅನಾಥನೂ ಇರುತ್ತೇನೆಂದು ಅನ್ನುತ್ತಾನೋ ಅವನು ಹಾಗೆಯೇ ಆಗುತ್ತಾನೆ. ಯಾವನು– " ಎಲೈ ಪರಮೇಶ್ವರನೇ, ನೀನು ನನಗೆ ಬೇಕಾದದ್ದನ್ನೆಲ್ಲ ಕೊಟ್ಟಿರುವೆ. ನನಗೆ ನಿನ್ನ ಕೃಪೆಯಿಂದ ಯಾತರದೂ ಕೊರತೆಯು ಇಲ್ಲ" ಎಂದು ಅನ್ನುತ್ತಾನೋ ಅವನಿಗೆ ಎಲ್ಲವು ದೊರಕುತ್ತದೆ.

---

# ೫೮. ಪರಮೇಶ್ವರನಿಗೆ ಯಾವದೂ ಅಸಂಭವವಿಲ್ಲ.

ಒಂದುಸಾರೆ ಇಬ್ಬರು ಸಾಧುಗಳು ತಮಗೆ ಪರಮೇಶ್ವರನ ದರ್ಶನವಾಗಬೇಕೆಂದು ತಪಶ್ಚರ್ಯವನ್ನು ನಡೆಸಿದಾಗ್ಗೆ ಒಂದು ದಿವಸ ನಾರದನು ಆ ಸಾಧುಗಳ ಪರ್ಣಕುಟಿಯು ಮುಂದೆ ಹಾದು ಹೋಗುತ್ತಿದ್ದನು. ಆಗ ಒಬ್ಬ ಸಾಧುವು ನಾರದನನ್ನು ನೋಡಿ —“ ನೀವು ಸ್ವರ್ಗಲೋಕದಿಂದ ಬಂದಿರಾ?” ಎಂದು ಕೇಳಿದನು. ಅದಕ್ಕೆ ಅವನು “ ಹೌದು” ಎಂದು ಹೇಳಿದನು. “ಹಾಗಾದರೆ ಸ್ವರ್ಗದಲ್ಲಿ ಪರಮೇಶ್ವರನು ಏನು ಮಾಡುತ್ತಿರುವನು ಹೇಳಿರಿ” ಎಂದು ಆ ಸಾಧುವು ನಾರದನಿಗೆ ಕೇಳಿದನು. ಅದಕ್ಕೆ ನಾರದನು-“ ಪರಮೇಶ್ವರನು ಸೂಜಿಯ ಬಾಯಿಯೊಳಗಿಂದ ಒಂಟೆಗಳನ್ನೂ ಆನೆಗಳನ್ನೂ ಹಾಯಿಸುತ್ತಿದ್ದು ಅವು ಸೂಜಿಯ ಒಳಗೆ ಹೋಗಿ ಹೊರಗೆ ಬರುತ್ತಿರುವದನ್ನು ನಾನು ಕಂಡೆನು” ಎಂದು ಹೇಳಿದನು. ಇದಕ್ಕೆ ಒಬ್ಬ ಸಾಧುವು—“ ಇದರಲ್ಲಿ ಆಶ್ಚರ್ಯವೇನೂ ಇಲ್ಲ ಪರಮೇಶ್ವರನಿಗೆ ಯಾವದೂ ಅಸಾಧ್ಯವಲ್ಲ” ಎಂದು ಹೇಳಿದನು. ಆಗ ಇನ್ನೊಬ್ಬ ಸಾಧುವು— “ ಇದು ಅಸಂಭವವದೆ. ಇದರ ಮೇಲಿಂದ ನೀನು ಪರಮೇಶ್ವರನು ಇದ್ದಲ್ಲಿಗೆ ಎಂದೂ ಹೋಗಲಿಲ್ಲವೆಂದು ಕಾಣುತ್ತದೆ” ಎಂದು ಹೇಳಿದನು. ಮೊದಲನೆಯವನು ಭಕ್ತನಿದ್ದ ಕಾರಣ ಅವನು ಸಣ್ಣ ಕೂಸಿನಂತೆ ವಿಶ್ವಾಸವಿಟ್ಟನು. ಎರಡನೆಯವನು ಭಕ್ತನಲ್ಲದ ಕಾರಣ ತನ್ನ ಬುದ್ಧಿಗೆ ಅಸಂಭವವೆಂದು ಕಂಡ ಪ್ರಕಾರ ವಿಶ್ವಾಸವಿಡಲಿಲ್ಲ.

## ತಾತ್ಪರ್ಯ.

ಪರಮೇಶ್ವರನಿಗೆ ಯಾವದೂ ಅಸಂಭವವಿಲ್ಲ. ಅವನಲ್ಲಿ **ಕರ್ತುಂ, ಅಕರ್ತುಂ, ಅನ್ಯಥಾ ಕರ್ತುಂ ಶಕ್ತಿ**ಯುಂಟು.

## ೫೯. ಒಬ್ಬ ವೇಷಧಾರಿ ಸಾಧುವು.

ಒಬ್ಬ ಮೀನ ಹಿಡಿಯುವವನು ರಾತ್ರಿಯ ಹೊತ್ತಿನಲ್ಲಿ ಒಂದು ತೋಟದೊಳಗೆ ಹೋಗಿ ಅದರಲ್ಲಿದ್ದ ನೀರಿನ ಹೊಂಡದಲ್ಲಿ ತನ್ನ ಬಲೆಯನ್ನು ಹಾಕಿ ಮೀನಗಳನ್ನು ಹಿಡಿಯುತ್ತಿದ್ದನು. ಆಗ ಆ ತೋಟದ ಒಡೆಯನು ಈ ಮೀನ ಹಿಡಿಯುವ ಸಪ್ಪಳವನ್ನು ಕೇಳಿ ಆ ಮೀನಗಾರನನ್ನು ಹಿಡಿದು ತರಲಿಕ್ಕೆ ತನ್ನ ಸೇವಕರನ್ನು ಕಳುಹಿಸಿದನು. ಆ ಸೇವಕರು ಆ ಕಳ್ಳನನ್ನು ಹುಡುಕಲಿಕ್ಕೆ ತಮ್ಮ ಕೈಯಲ್ಲಿ ದೀವಟಿಗೆಗಳನ್ನು ಹಿಡಕೊಂಡು ಬಂದರು. ಇಷ್ಟರಲ್ಲಿ ಆ ಮೀನ ಹಿಡಿಯುವವನು ತನ್ನ ಬಲೆಯನ್ನು ನೀರೊಳಗೆ ಚಲ್ಲಿಕೊಟ್ಟು, ತನ್ನ ಮೋರೆಗೆ ಬೂದಿಯನ್ನು ಹಚ್ಚಿಕೊಂಡು, ಒಂದು ಗಿಡದ ಕೆಳಗೆ ಜಪ ಮಾಡುವ ಸಾಧುವಿನಂತೆ ಕುಳಿತುಕೊಂಡನು. ಆ ಸೇವಕರು ಎಷ್ಟು ಹುಡುಕಿದರೂ ಕಳ್ಳನು ಸಿಗಲಿಲ್ಲ. ಆದರೆ ಅವರು ಈ ಸಾಧುವು ಜಪ ಮಾಡುತ್ತ ಕುಳಿತಿರುವದನ್ನು ಕಂಡರು. ಆಗ ಅವರು ತಮ್ಮ ಒಡೆಯನ ಕಡೆಗೆ ತಿರುಗಿ ಹೋಗಿ ತಾವು ನೋಡಿದ್ದನ್ನೆಲ್ಲ ಹೇಳಿದರು. ಆಗ ಅನೇಕ ಜನರು ಅವನ ದರ್ಶನಕ್ಕಾಗಿ ಬಂದು ಅವನ ಮುಂದೆ ಹೂವು ಹಣ್ಣು ಮಿಠಾಯಿಗಳನ್ನು ಇಟ್ಟು ಅವನಿಗೆ ನಮಸ್ಕಾರಗಳನ್ನು ಮಾಡಿದರು. ಮರುದಿವಸ ಜನರು ಗುಂಪು ಗುಂಪಾಗಿ ಬಂದು ಅವನಿಗೆ ರೊಕ್ಕವನ್ನೂ ಬೇಕಬೇಕಾದ ಸಾಮಾನುಗಳನ್ನೂ ತಂದು ಕೊಟ್ಟರು. ಆಗ ಮೀನಗಾರನು—"ನಾನು ವೇಷಧಾರಿ ಸಾಧುವು ಇದ್ದರೂ ನನಗೆ ಜನರು ಇಷ್ಟು ಹೆಚ್ಚಾಗಿ ಕಾಣಿಕೆಗಳನ್ನು ತಂದು ಕೊಡುತ್ತಾರೆ. ಆದರೆ ನಾನು ನಿಜವಾದ ಸಾಧುವು ಆದಲ್ಲಿ ನನಗೆ ಇನ್ನೂ ಎಷ್ಟು ಹೆಚ್ಚು ಸಿಗಬಹುದು! ಇದಲ್ಲದೆ ಅದರಿಂದ ನನಗೆ ನಿಸ್ಸಂಶಯವಾಗಿ ದೇವರ ದರ್ಶನವು ಆಗಬಹುದು" ಎಂದು ತಿಳಿದುಕೊಂಡು ಸನ್ಮಾರ್ಗದಿಂದ ನಡೆಯಲಿಕ್ಕೆ ಹತ್ತಿದನು.

### ತಾತ್ಪರ್ಯ.

ಮನುಷ್ಯನಿಗೆ ದುರ್ಬುದ್ಧಿಯು ಹೋಗಿ ಸದ್ಬುದ್ಧಿಯು ಬರಬೇಕಾದರೆ ಏನಾದರೂ ಒಂದು ಕಾರಣವು ಸಂಭವಿಸಬೇಕಾಗುತ್ತದೆ. ಯೋಗವು ಬಂದ

ಕೂಡಲೆ ಸದ್ಗುರುಗಳು ಯಾವದಾದರೂ ರೂಪದಿಂದ ಬಂದು ಸದ್ಬುದ್ಧಿಯನ್ನು ಉಪದೇಶಿಸುವರು.

---

## ೬೦. ಅಪಾತ್ರ ದಾನವು.

ಒಂದಾನೊಂದು ದಿವಸ ಒಬ್ಬ ಕಟಕನು ಒಂದು ಆಕಳವನ್ನು ದೂರದಲ್ಲಿರುವ ಒಂದು ಸ್ಥಳಕ್ಕೆ ಕೊಯ್ಯುವದಕ್ಕಾಗಿ ಒಯ್ಯುತ್ತಿದ್ದನು. ಆಗ ಆ ಮನುಷ್ಯನು ದಾರಿಯಲ್ಲಿ ಆ ಆಕಳಿಗೆ ಹೊಡದು ಬಡದು ಮಾಡಿದ ಕಾರಣ ಅದು ದಾರಿಯಲ್ಲಿ ಬಹಳ ಗೊಂದಲವನ್ನು ಮಾಡಲಿಕ್ಕೆ ಹತ್ತಿತು. ಇದರಿಂದ ಅವನಿಗೆ ಆದನ್ನು ತನ್ನ ಸಂಗಡ ಒಯ್ಯಲಿಕ್ಕೆ ಬಹಳ ಕಷ್ಟವಾಯಿತು. ಆದುದರಿಂದ ಅವನು ಕೆಲವು ತಾಸು ನಡೆದ ಮೇಲೆ ಮಧ್ಯಾಹ್ನದಲ್ಲಿ ಒಂದು ಹಳ್ಳಿಗೆ ಬಂದು ಮುಟ್ಟಿದನು. ಅವನಿಗೆ ಹಸಿವೆ ನೀರಡಿಕೆಗಳು ಬಹಳ ಆಗಿ ಅವನು ದಣಿದದ್ದರಿಂದ ಸಮೀಪದಲ್ಲಿದ್ದ ಒಂದು ಅನ್ನಛತ್ರಕ್ಕೆ ಹೋಗಿ ತನ್ನ ಊಟವನ್ನು ತೀರಿಸಿಕೊಂಡನು. ಈ ಮೇರೆಗೆ ವಿಶ್ರಾಂತಿಯನ್ನು ತೆಗೆದುಕೊಂಡ ಬಳಿಕ ಅವನು ಆ ಆಕಳವನ್ನು ತನ್ನ ಊರಿಗೆ ಸುಲಭವಾಗಿ ಒಯ್ದನು. ಆದರೆ ಆ ಆಕಳವನ್ನು ಕೊಂದ ಪಾಪವು ಅನ್ನಛತ್ರದ ಒಡೆಯನಿಗೆ ಸಹ ತಟ್ಟಿತು.

### ತಾತ್ಪರ್ಯ.

ಸತ್ಪಾತ್ರರಿಗೆ ದಾನಧರ್ಮ ಮಾಡಬೇಕಲ್ಲದೆ ಪಾಪಿಷ್ಟರಿಗೂ ದುರ್ವ್ಯಸನಿಗಳಿಗೂ ಎಂದೂ ಮಾಡಬಾರದು.

---

## ೬೧. ಜ್ಞಾನವೆಂಬ ವಿದ್ಯುಲ್ಲತೆಯ ಬೆಳಕು.

ಬರೇ ದುಡ್ಡು ಇದ್ದವರು ಶ್ರೀಮಂತರೆನಿಸುವದಿಲ್ಲ. ಯಾರ ಮನೆಯ ಪ್ರತಿಯೊಂದು ಕೋಣೆಯಲ್ಲಿ ದೀಪವು ಉರಿಯುತ್ತಿರುವದೋ ಅಂಥವರು ಶ್ರೀಮಂತರು. ಬಡವರಿಗೆ ಇಷ್ಟೊಂದು ಎಣ್ಣೆಯನ್ನು ವೆಚ್ಚ ಮಾಡುವದು

ಆಗುವದಿಲ್ಲ. ಆದುದರಿಂದ ಅವರಿಗೆ ಇಷ್ಟು ದೀಪಗಳನ್ನು ಇಡಲಿಕ್ಕೆ ಆಗುವದಿಲ್ಲವೆಂಬುವದು ಸಹಜವು. ಇದೇ ಮೇರೆಗೆ ಈ ದೇಹವೆಂಬ ಗುಡಿಯನ್ನು ಕತ್ತಲು ಮಾಡಿಗೊಡದೆ ಅದರಲ್ಲಿ ಜ್ಞಾನವೆಂಬ ದೀಪವನ್ನು ಹಚ್ಚಿ ಬೆಳಕು ಮಾಡಬೇಕು. ಮನುಷ್ಯರು ತಮ್ಮ ಕೋಣೆಯಲ್ಲಿ ಜ್ಞಾನದ ದೀಪವನ್ನು ಹಚ್ಚಿ ಆ ಜಗನ್ಮಾತೆಯ ಮೋರೆಯ ಕಡೆಗೆ ನೋಡಿದರೆ ಪ್ರತಿಯೊಬ್ಬರಿಗೂ ಜ್ಞಾನವು ಪ್ರಾಪ್ತಿಯಾಗಿ ಆತ್ಮಭೇದ ಮಾಡಿದವನ ಮತ್ತು ಆತ್ಮೈಕ್ಯನಾದವನ ಅಂತರವು ನಿಜವಾಗಿ ತಿಳಿದುಬರುವದು. ಪ್ರತಿಯೊಬ್ಬರಿಗೆ ತಮ್ಮ ಮನೆಯಲ್ಲಿ ವಿದ್ಯುಲ್ಲತೆಯ ದೀಪವನ್ನು ತೆಗೆದುಕೊಳ್ಳುವದು ಸಾಧ್ಯವಿರುತ್ತದೆ. ವಿದ್ಯುಲ್ಲತೆಯ ಸಂಘದವರು ಪ್ರತಿಯೊಂದು ಮನೆಗೆ ವಿದ್ಯುಲ್ಲತೆಯನ್ನು ಪೂರೈಸುತ್ತಾರೆ. ಆದರೆ ನಾವು ಯೋಗ್ಯ ಅಧಿಕಾರಿಗಳಿಗೆ ಬರೆದುಕೊಂಡರೆ ಅವರು ಅದನ್ನು ಪೂರೈಸುವ ವ್ಯವಸ್ಥೆಯನ್ನು ಮಾಡುವರು. ಆ ಮೇಲೆ ನಮ್ಮ ಕೋಣೆಯಲ್ಲಿ ವಿದ್ಯುಲ್ಲತೆಯ ದೀಪದ ಪ್ರಕಾಶವು ಸಹಜವೇ ಬೀಳುವದು.

### ತಾತ್ಪರ್ಯ.

ನಾವು ವಿದ್ಯುಲ್ಲತೆಯ ಸಂಘದ ಅಧಿಕಾರಿಗಳಿಗೆ ಬರೆದ ಕೂಡಲೆ ಅವರು ನಮ್ಮ ಮನೆಗೆ ವಿದ್ಯುಲ್ಲತೆಯನ್ನು ಪೂರೈಸಿ ಪ್ರಕಾಶವನ್ನು ಮಾಡುವಂತೆ ಸದ್ಗುರುಗಳಿಗೆ ಮೊರೆ ಹೋದರೆ ಅವರು ದಿವ್ಯ ಉಪದೇಶವೆಂಬ ವಿದ್ಯುಲ್ಲತೆಯಿಂದ ನಮ್ಮ ಆತ್ಮದಲ್ಲಿ ಜ್ಞಾನವೆಂಬ ಪ್ರಕಾಶವನ್ನುಂಟು ಮಾಡುತ್ತಾರೆ.

---

## ೬೨. ಆತ್ಮದ ಅಂತಿಮ ಧ್ಯೇಯವು.

ಒಬ್ಬ ಗೃಹಸ್ಥನಿಗೆ ಅವನ ಊರಿಂದ ಅವನ ಆಪ್ತರಿಗಾಗಿ ಕೆಲವು ಸಾಮಾನುಗಳನ್ನು ಕಳುಹಿಸಲಿಕ್ಕೆ ಒಂದು ಪತ್ರವು ಬಂದಿತ್ತು. ಅದರಂತೆ ಆ ಸಾಮಾನುಗಳನ್ನು ಕೊಂಡುಕೊಳ್ಳಲಿಕ್ಕೆ ಅವನು ಪೇಟೆಯೊಳಗೆ ಹೋಗತಕ್ಕವನಿದ್ದನು. ಆದರೆ ಅವನು ಪೇಟೆಗೆ ಹೊರಡುವ ಸಮಯದಲ್ಲಿ ಅವನಿಗೆ ಆ ಪತ್ರವು ಸಿಗಲಿಲ್ಲ. ಅದು ಎಲ್ಲಿಯೋ ಬಿದ್ದು ಹೋಗಿತ್ತು. ಅವನು ಅದನ್ನು ಬಹ

ಹೊತ್ತಿನ ತನಕ ಹುಡುಕಿದನು. ಅವನ ಕಡೆಯು ಜನರೂ ಅವನಂತೆ ಅದನ್ನು ಹುಡುಕಿದರು. ಕಡೆಗೆ ಅದು ಸಿಕ್ಕಿತು. ಆಗ ಅವನು ಅದನ್ನು ಕೈಯಲ್ಲಿ ತೆಗೆದು ಕೊಂಡು ಉತ್ಕಂಠತೆಯಿಂದ ಓದಿದನು. ಅದರೊಳಗೆ "ಐದು ಸೇರು ಮಿಠಾಯಿ, ೧೦೦ ಕಿತ್ತಳೆ ಹಣ್ಣು ಮತ್ತು ಎಂಟು ಅರಿವೆಯ ತುಂಡುಗಳನ್ನು ಕಳಿಸು" ಎಂದು ಬರೆದಿತ್ತು. ಆ ಪತ್ರದಲ್ಲಿ ಬರೆದದ್ದು ಏನೇನು ಎಂಬುವದು ಅವನಿಗೆ ಚನ್ನಾಗಿ ತಿಳಿದ ನಂತರ ಅವನು ಅದನ್ನು ಚಲ್ಲಿಕೊಟ್ಟನು. ಇಂಥ ಪತ್ರವನ್ನು ಒಬ್ಬನು ಎಷ್ಟು ಹೊತ್ತಿನ ತನಕ ಓದುತ್ತಾನೆ? ಅದರೊಳಗೆ ಬರೆದದ್ದು ತನಗೆ ಚನ್ನಾಗಿ ತಿಳಿಯುವ ತನಕ ಓದುತ್ತಾನೆ. ಆ ಮೇಲೆ ಅವನು ಅದರಲ್ಲಿ ಬರೆದ ಪ್ರಕಾರ ಸಾಮಾನುಗಳನ್ನು ಕೊಂಡು ತರುವ ಉದ್ಯೋಗಕ್ಕೆ ಹತ್ತುತ್ತಾನೆ.

### ತಾತ್ಪರ್ಯ.

ಧರ್ಮಗ್ರಂಥಗಳನ್ನು ಓದಿ ಪರಮೇಶ್ವರನ ಮಾರ್ಗವನ್ನು ಒಮ್ಮೆ ತಿಳಿದುಕೊಂಡ ಮನುಷ್ಯನು ಏಕಾಂತದಲ್ಲಿ ಆತನ ಧ್ಯಾನ ಮಾಡಿ, ಆತನಿಗೆ ಭಕ್ತಿಯನ್ನರ್ಪಿಸಿ, ಆತನನ್ನು ಪ್ರಸನ್ನ ಮಾಡಿಕೊಳ್ಳಲಿಕ್ಕೆ ಪ್ರಯತ್ನ ಮಾಡುವನು. ಸುಮ್ಮನೆ ಧರ್ಮಗ್ರಂಥಗಳನ್ನು ತಿರುತಿರುಗಿ ಓದುವದರಿಂದ ಪ್ರಯೋಜನವಿಲ್ಲ. ಅವುಗಳಲ್ಲಿ ಹೇಳಿದ್ದನ್ನು ನೆನಪು ಇಟ್ಟುಕೊಂಡು ಅದರಂತೆ ಆಚರಿಸಬೇಕು. ಅಂದರೆ ಅವುಗಳನ್ನು ಓದಿಕೊಂಡದ್ದು ಸಫಲವಾದಂತಾಗುವದು. ಬೋಧವಿಲ್ಲದ ಓದು ನೀರೊಳಗೆ ಹೋಮ ಮಾಡಿದಂತೆ ನಿರುಪಯೋಗವಾಗುವದು.

---

## ೬೩. ಅತ್ಯಾಶೆಯು ಗತಿಗೆಡಿಸಿತು.

ಒಬ್ಬ ನಾವಲಿಗನು ಯಕ್ಷನಿರುವಂಥ ಒಂದು ಗಿಡದ ಬಳಿಯಿಂದ ಹಾದು ಹೋಗುತ್ತಿದ್ದನು. ಆಗ ಅವನಿಗೆ–"ನಿನಗೆ ಹೊನ್ನು ತುಂಬಿದ ಏಳು ಕೊಡಗಳು ಬೇಕೋ?" ಎಂದು ಯಾರೋ ಅವನಿಗೆ ಪ್ರಶ್ನೆ ಕೇಳಿದಂತೆ ಕೇಳಬಂತು. ಆಗ ಅವನು ಆಶ್ಚರ್ಯದಿಂದ ತನ್ನ ಸುತ್ತಲು ನೋಡಲಾಗಿ ಅಲ್ಲಿ ಯಾರೂ ಕಾಣಿಸಲಿಲ್ಲ. ಆದರೂ ಆ ನಾವಲಿಗನು ದ್ರವ್ಯದ ಆಶೆಯಿಂದ ಗಟ್ಟಿ

ಮನಸ್ಸು ಮಾಡಿ–“ಹೌದು. ನನಗೆ ಅವು ಬೇಕು” ಎಂದು ಉತ್ತರ ಕೊಟ್ಟ ನು. ಆ ಕೂಡಲೆ–“ಅವುಗಳನ್ನು ನಿನ್ನ ಮನೆಯಲ್ಲಿ ಒಯ್ದು ಇಟ್ಟಿರುವೆನು. ನೀನು ಮನೆಗೆ ಹೋಗಿ ನೋಡಿಕೋ” ಎಂದು ಅವನಿಗೆ ಪ್ರತ್ಯುತ್ತರವು ಕೇಳಿ ಸಿತು. ಆ ಬಳಿಕ ಆ ನಾವಲಿಗನು ತನ್ನ ಮನೆಗೆ ಹೋಗಿ ನೋಡಲಾಗಿ ಆರು ಕೊಡಗಳು ಬಂಗಾರದಿಂದ ಪೂರ್ಣವಾಗಿ ತುಂಬಿದ್ದು ಏಳನೇ ಕೊಡವು ಮಾತ್ರ ಅರ್ಧ ತುಂಬಿತ್ತು. ಆಗ ಅವನು ಆ ಏಳನೇ ಕೊಡವನ್ನು ಸಹ ತುಂಬಬೇಕೆಂದು ನಿಶ್ಚಯ ಮಾಡಿ ತನ್ನ ಮನೆಯೊಳಗಿನ ಯಾವತ್ತು ವಸ್ತು ಒಡಿವೆಗಳನ್ನು ಮಾರಾಟ ಮಾಡಿ ಅದರಿಂದ ಬಂದ ಬಂಗಾರದ ನಾಣ್ಯಗಳನ್ನು ಆ ಕೊಡದಲ್ಲಿ ಹಾಕಿದನು. ಆದರೂ ಅದು ತುಂಬಲಿಲ್ಲ. ಆಗ ಆ ನಾವಲಿಗನು ಸಿಟ್ಟಿಗೆದ್ದು ತನ್ನ ಹೆಂಡರು ಮಕ್ಕಳನ್ನು ಉಪವಾಸಕೆಡವಿ, ತಾನೂ ಉಪವಾಸ ಬಿದ್ದು, ತನ್ನ ಪ್ರಪಂಚಕ್ಕೆ ಇಟ್ಟುಕೊಂಡಿದ್ದ ಸಾಮಾನುಗಳನ್ನು ಮಾರಾಟ ಮಾಡಿ ಅದರಿಂದ ಬಂದ ಬಂಗಾರದ ನಾಣ್ಯಗಳನ್ನು ಸಹ ಆ ಕೊಡದಲ್ಲಿ ತುಂಬಿದನು. ಆದರೂ ಆ ಏಳನೇ ಕೊಡವು ತುಂಬಲಿಲ್ಲ. ಆ ನಾವಲಿಗನು ದಿನಾಲು ಅರಸನ ಕ್ಷೌರಮಾಡಲಿಕ್ಕೆ ಹೋಗುತ್ತಿದ್ದನು. ಅವನು ತನ್ನ ನಿತ್ಯ ಸಾಂಪ್ರದಾಯದಂತೆ ಅರಸನ ಕ್ಷೌರ ಮಾಡಲಿಕ್ಕೆ ಹೋದಾಗ ಅರಸನಿಗೆ–“ಮಹಾರಾಜರೇ, ನೀವು ಈಗ ನನಗೆ ಕೊಡುವ ಸಂಬಳವು ಸಾಕಾಗುವದಿಲ್ಲ. ಆದುದರಿಂದ ಅದನ್ನು ಹೆಚ್ಚಿಸಬೇಕು” ಎಂದು ದೈನ್ಯಭಾವದಿಂದ ಬೇಡಿಕೊಂಡನು. ಅರಸನು ಅವನ ದೈನ್ಯ ಭಾವವನ್ನು ನೋಡಿ ಅವನ ಸಂಬಳವನ್ನು ಇಮ್ಮಡಿ ಮಾಡಿದನು. ಆ ನಾವಲಿಗನು ತನ್ನ ಸಂಬಳದ ಹಣವನ್ನೂ ಇತರ ಪ್ರಾಪ್ತಿಯ ಹಣವನ್ನೂ ತನ್ನ ಮತ್ತು ತನ್ನ ಕುಟುಂಬದವರ ಹೊಟ್ಟೆಯನ್ನು ಸಹ ಕಟ್ಟಿಕೊಂಡು ಆ ಕೊಡದಲ್ಲಿ ಹಾಕಹತ್ತಿದನು. ಆದರೂ ಆ ಕೊಡವು ತುಂಬಲಿಲ್ಲ. ಆಗ ಅವನು ಊರಲ್ಲಿ ಭಿಕ್ಷೆಯನ್ನು ಬೇಡಿ ಅದರಿಂದ ಬಂದ ಹಣವನ್ನು ಅದರಲ್ಲಿ ಹಾಕಹತ್ತಿದನು. ಆದರೂ ಆ ಸರ್ವಭಕ್ಷಕ ಕೊಡವು ತುಂಬಲಿಲ್ಲ. ಬರಬರುತ್ತ ಆ ನಾವಲಿಗನ ಸ್ಥಿತಿಯು ಬಹಳೇ ಹೀನವಾಯಿತು. ಅರಸನು ಈ ಅವನ ದುರ್ದಶೆಯನ್ನು ಕಂಡು ಒಂದು ದಿವಸ ಅವನಿಗೆ–“ಈ ಮೊದಲು ನಿನಗೆ ನಾನು ಕೊಡುತ್ತಿದ್ದ ಸಣ್ಣ ಸಂಬಳದಿಂದ ನೀನು ಸುಖಿಯಾಗಿದ್ದಿ. ಈಗ ನಾನು ನಿನ್ನ ಸಂಬಳವನ್ನು ಇಮ್ಮಡಿ ಮಾಡಿ

ದಾಗ್ಯೂ ನೀನು ಇನ್ನೂ ಮಿಡುಕುವದು ತಪ್ಪಲೊಲ್ಲದು. ನಿನಗೆ ಯಕ್ಷನಿಂ ಏಳು ಹೊನ್ನಿನ ಕೊಡಗಳು ಸಿಕ್ಕಿರುತ್ತವ್ರೋ?" ಎಂದು ಕೇಳಿದನು. ಆಗ ಸಾವಲಿಗನು ಆಶ್ಚರ್ಯಪಟ್ಟು—"ನಿಮಗೆ ಈ ವರ್ತಮಾನವನ್ನು ಯಾರು ಹೇ ದರು?" ಎಂದು ಕೇಳಿದನು. ಅದಕ್ಕೆ ಅರಸನು—"ಯಕ್ಷನಿಂದ ಏಳು ಕೊಡ ಳನ್ನು ಪಡೆದವನ ಅವಸ್ಥೆಯು ಹೀಗೆ ಆಗುವದು ಸ್ವಾಭಾವಿಕವಿರುತ್ತದೆ. ಂ ಕ್ಷನು ನನಗಾದರೂ ಏಳು ಹೊನ್ನಿನ ಕೊಡಗಳನ್ನು ತೆಗೆದುಕೋ ಎಂ ಜಿನ್ನವಿಸಿದನು. ಆದರೆ ನಾನು ಆ ಹಣವನ್ನು ನನ್ನ ಮನಸ್ಸಿಗೆ ಬಂದಂ ವೆಚ್ಚ ಮಾಡುವೆನು; ಇದಕ್ಕೆ ನಿನ್ನ ಒಪ್ಪಿಗೆ ಇದ್ದರೆ ಕೊಡೆಂದು ಕೇಳಲು ವನು ಸುಮ್ಮನೆ ಹೊರಟು ಹೋದನು. ಯಕ್ಷನ ಕೊಡಗಳನ್ನು ಇಟ್ಟುಕೊ ಡವರಿಗೆ ದ್ರವ್ಯವನ್ನು ಹೆಚ್ಚಿಗೆ ಸಂಗ್ರಹ ಮಾಡುವ ಇಚ್ಛೆಯು ಮಾತ್ರ ಬೆ ಯುವದಲ್ಲದೆ ಅದನ್ನು ವೆಚ್ಚ ಮಾಡುವ ಅಪೇಕ್ಷೆಯು ಆಗುವದಿಲ್ಲ. ಆದು ರಿಂದ ಆ ಕೊಡಗಳನ್ನು ಯಕ್ಷನಿಗೆ ತಿರುಗಿ ಮುಟ್ಟಿಸಿ ಬಾ" ಎಂದು ಉಪದೇ ಮಾಡಿದನು. ಆಗ ಆ ನಾವಲಿಗನು ತನ್ನ ಕೊಡಗಳನ್ನೆಲ್ಲ ತೆಗೆದುಕೊಂಡು ಂ ಕ್ಷನು ಇದ್ದ ಗಿಡದ ಬಳಿಗೆ ಹೋಗಿ—"ನಿನ್ನ ಬಂಗಾರದ ಕೊಡಗಳನ್ನು ನೀ ತಿರುಗಿ ತೆಗೆದುಕೊಳ್ಳಬೇಕು" ಎಂದು ಹೇಳಿ ಕೊಟ್ಟು ಬಂದನು. ಆಗಿನಿಂ ಅವನ ಅತ್ಯಾಶೆಯು ಹೊರಟು ಹೋಗಿ ಮುಂಚಿನಂತೆ ಸಮಾಧಾನದಿಂದ ಇ ಲಿಕ್ಕೆ ಹತ್ತಿದನು.

## ತಾತ್ಪರ್ಯ.

ಅತ್ಯಾಶೆಯನ್ನು ಎಂದೂ ಮಾಡಬಾರದು. ಅತ್ಯಾಶೆಯು ಯಾವಾಗ ಗತಿಗೆಡಿಸುವದು. ಮನುಷ್ಯನು ಒಮ್ಮೆ ದ್ರವ್ಯಲೋಭದಲ್ಲಿ ಸಿಲ್ಕಿಕೊಂಡರೆ ಅ ನಿಗೆ ಎಷ್ಟು ಗಳಿಸಿದರೂ ತೃಪ್ತಿಯೇ ಆಗುವದಿಲ್ಲ. ದ್ರವ್ಯಕ್ಕೆ ಯಾವಾಗ ಬಹಳ ಗಂಡಾಂತರಗಳಿರುತ್ತವೆ. ದ್ರವ್ಯವಿರುವವರಿಗೆ ತಮ್ಮಲ್ಲಿರುವದನ್ನು ಕಳ್ ರು ಕದ್ದೊಯ್ದಾರೆಂದು ಯಾವಾಗಲು ಚಿಂತೆ ಮಾಡುತ್ತ ಕೂಡ್ರಬೇಕಾಗುತ ದೆ. ಹಣವನ್ನು ಗಳಿಸುವದೂ ಕಷ್ಟ. ಅದನ್ನು ಕಾಪಾಡುವದೂ ಕಷ್ಟ. ಅದ ನಿಜವಾದ ಉಪಯೋಗವನ್ನು ಮಾಡಬಲ್ಲವರು ಮಾತ್ರ ಸುಖಿಗಳು. ಹಣ ರುವ ಯಾವತ್ತರು ಸುಖಿಗಳೆಂದು ತಿಳಿಯಲಾಗದು. ಎಷ್ಟೋ ಬಡಜನರು ತ

ವು ದುಡಿದು ತಂದ ಅಲ್ಪ ಹಣದಿಂದ ಬಾಳುವೆ ಮಾಡಿ ಸುಖಪಡುತ್ತಾರೆ. ಆದರೆ ಎಷ್ಟೋ ಶ್ರೀಮಂತರು ತಮ್ಮ ಹಣವನ್ನು ಹೇಗೆ ಹೆಚ್ಚು ಕೂಡಿಸಬೇಕು ಮತ್ತು ಹೇಗೆ ಕಾಪಾಡಬೇಕು ಎಂಬ ಚಿಂತೆಯಲ್ಲಿ ನಿಮಗ್ನರಾಗಿರುತ್ತಾರೆ. ಹಣದ ಯೋಗ್ಯ ಉಪಯೋಗವನ್ನು ಮಾಡದಂಥ ಕೃಪಣ ಶ್ರೀಮಂತರಾಗುವದಕ್ಕಿಂತ ಪರೋಪಕಾರ ಮಾಡುವ ಬಡವರಾಗಿರುವದು ಸಾವಿರ ಪಾಲು ನೆಟ್ಟಗೆ.

---

## ೬೪. ನಿಃಸ್ವಾರ್ಥ ಪ್ರೇಮವು.

ಒಬ್ಬಾನೊಬ್ಬ ಬ್ರಾಹ್ಮಣನು ಒಬ್ಬ ಸನ್ಯಾಸಿಯ ಬಳಿಗೆ ಧರ್ಮಸಂಬಂಧವಾಗಿ ಉಪದೇಶವನ್ನು ಕೇಳಲಿಕ್ಕೆ ಹೋದಾಗ ಆ ಸನ್ಯಾಸಿಯು ಅವನಿಗೆ-"ಈ ಜಗತ್ತಿನಲ್ಲಿ ನಿಃಸ್ವಾರ್ಥ ಪ್ರೇಮವು ಎಲ್ಲಿಯೂ ಇಲ್ಲ" ಎಂದು ಹೇಳಿದನು. ಅದನ್ನು ಆ ಬ್ರಾಹ್ಮಣನು ಒಡಂಬಡಲಿಲ್ಲ. ಆಗ ಆ ಸನ್ಯಾಸಿಯು ಅವನಿಗೆ ಈ ಮಾತಿನ ಸತ್ಯತೆಯನ್ನು ಅನುಭವಕ್ಕೆ ತಂದುಕೊಡುವದಕ್ಕಾಗಿ-"ನೀನು ನಿನ್ನ ಮನೆಗೆ ಹೋದ ಬಳಿಕ ಕೆಲವು ಹೊತ್ತು ನಿನ್ನ ಕೈಕಾಲು ಸೆಟಿಸಿ ಸತ್ತಂತೆ ಬಿದ್ದುಕೋ. ಆ ಮೇಲೆ ನಾನು ಅಲ್ಲಿಗೆ ಬಂದು ಒಂದು ಚಮತ್ಕಾರವನ್ನು ಮಾಡುವೆನು" ಎಂದು ಹೇಳಿದನು. ಅದರಂತೆ ಆ ಬ್ರಾಹ್ಮಣನು ಮಾಡಿದನು. ಆಗ ಸ್ವಲ್ಪ ಹೊತ್ತಿನಲ್ಲಿಯೇ ಆ ಸನ್ಯಾಸಿಯು ಅಲ್ಲಿಗೆ ಹೋಗಿ ಅವನ ಹೆಂಡತಿಗೆ-"ನೀನು ಈ ಹೆಣವನ್ನು ಕೋಣೆಯ ಹೊರಗೆ ಹೇಗೆ ಒಯ್ಯುತ್ತೀ? ಈ ಕೋಣೆಯ ಬಾಗಿಲವು ಸಣ್ಣದಿದ್ದು ಹೆಣವು ಬಹಳ ಗಡುತರವಿರುತ್ತದೆ. ಆದುದರಿಂದ ನಿನಗೆ ಈ ಬಾಗಿಲವನ್ನು ಕೊರಿಸಿ ಗೋಡೆಯನ್ನು ಕೆಡವಿಸಬೇಕಾಗುವದು. ಇಲ್ಲವೆ ನಿನ್ನ ಗಂಡನ ಕೈಕಾಲು ಕಡಿದು ಈ ಹೆಣವನ್ನು ಸ್ವಲ್ಪ ಸಣ್ಣದು ಮಾಡಬೇಕಾಗುವದು. ಇವೆರಡರಲ್ಲಿ ಒಂದು ಮಾಡಿದ ಹೊರತು ಈ ಹೆಣವನ್ನು ಕೋಣೆಯಿಂದ ಹೊರಗೆ ಒಯ್ಯುವದು ಅಸಾಧ್ಯವದೆ" ಎಂದು ಹೇಳಿದನು. ಇದನ್ನು ಕೇಳಿ ಅವಳು ಬಹಳ ಅತ್ತು-"ಅಯ್ಯೋ! ಈ ನನ್ನ ಹಗೇಬರಹದ ಮೂಲಕ ನಾನು ಆಜನ್ಮ ಬಡ ವಿಧವೆಯಾಗಿ ಇರಬೇಕಾಯಿತು. ನನ್ನ ಹೊಟ್ಟೆಗೆ ಏನೂ ಸಾಧನವು ಇಲ್ಲ. ಹೀಗಿದ್ದು ಈ ಬಾಗಿಲವನ್ನು ಕೊರಿಸಿ ಗೋಡೆಯನ್ನು ಕೆಡವಿಸಿದರೆ

ಇದನ್ನು ಹೊಸದಾಗಿ ಮಾಡಿಸಲಿಕ್ಕೆ ನಾನು ಎಲ್ಲಿಂದ ದುಡ್ಡು ತರಲಿ? ರಿಂದ ಎರಡನೇ ಹಂಚಿಕೆಯೇ ನನಗೆ ನೆಟ್ಟಗೆ ಕಾಣುತ್ತದೆ" ಎಂದು ಕೊಟ್ಟಳು.

ಇದನ್ನು ಕೇಳಿದ ಕೂಡಲೆ ಸುಳ್ಳೇ ಸತ್ತಂತೆ ಬಿದ್ದುಕೊಂಡಿದ್ದ ಣನು ಸಿಟ್ಟಿನಿಂದಲೂ ತಿರಸ್ಕಾರದಿಂದಲೂ ಮೇಲಕ್ಕೆ ಎದ್ದು-" ಎಲೇ ಳಾದ ಮಾಟಗಾರತಿಯೇ, ನೀನು ಇಷ್ಟು ದಿವಸ ನನ್ನನ್ನು ಇದೇ ಕಪಟ ಯಿಂದ ಪ್ರೀತಿ ಮಾಡಿದೆಯಾ? ನೀನು ಮೇಲಿಂದ ಮೇಲೆ ನನ್ನನ್ನು ನಿನ್ನ ದಕಿಂತಲು ಹೆಚ್ಚು ಪ್ರೀತಿ ಮಾಡುತ್ತೇನೆಂದು ಹೇಳುತ್ತಿದ್ದೆ. ಆದರೆ ಪ್ರೀತಿಯು ಎಲ್ಲಿ ಓಡಿಹೋಯಿತು? ನೀನು ಇಷ್ಟು ದಿವಸ ನನ್ನನ್ನು ವಂ ನಿನ್ನ ಮಾಟವು ಇನ್ನು ಮೇಲೆ ಮುಗಿಯಿತೆಂದು ತಿಳಿದುಕೋ" ಎಂ ಡಿದು ಸಂಸಾರದಲ್ಲಿಯ ಆಸಕ್ತಿಯನ್ನು ಕಡಿಮೆ ಮಾಡಿ ತನ್ನ ಆಯುಷ್ಯ ಪರಮೇಶ್ವರನ ಧ್ಯಾನದಲ್ಲಿಯೂ, ಭಕ್ತಿಯಲ್ಲಿಯೂ ಕಳೆದನು.

## ತಾತ್ಪರ್ಯ.

ಜಗತ್ತಿನಲ್ಲಿ ಎಲ್ಲರು ಸ್ವಾರ್ಥಕ್ಕಾಗಿಯೇ ಪ್ರೇಮ ಮಾಡುತ್ತಾರೆ. ತಾಯಿ ಹೆಂಡತಿ ಮಕ್ಕಳು ಇವರೆಲ್ಲರು ತಮಗೆ ನಾವು ಒಂದಿಲ್ಲೊಂದ ಯಿಂದ ಉಪಯೋಗಕ್ಕೆ ಬೀಳುತ್ತೇವೆಂದು ತಿಳಿದು ನಮ್ಮ ಮೇಲೆ ಮಾಡುತ್ತಾರೆ. ನಾವು ಸತ್ತು ಹೋದ ನಂತರ ಅವರು ನಮ್ಮ ಬಗ್ಗೆ ದಿವಸ ಹೆಚ್ಚುಕಡಿಮೆ ದುಃಖ ಮಾಡಿ ಹಿಂದುಗಡೆ ನಮ್ಮನ್ನು ಮರೆತುಬಿಡ ಇದೇ ಜಗತ್ತಿನ ಮಾಯೆಯು. ಜಗತ್ತಿನಲ್ಲಿ ನಿಃಸ್ವಾರ್ಥ ಪ್ರೇಮವು ಕಡಿಮೆ ಇರುವದು. ಆದುದರಿಂದ ನಾವು ಪ್ರಪಂಚದಲ್ಲಿದ್ದರೂ ಅದ ಶೇಷ ಆಸಕ್ತಿಯನ್ನಿಡದೆ ಪರಮೇಶ್ವರನಲ್ಲಿ ಭಕ್ತಿ ವಿಶ್ವಾಸಗಳನ್ನು ಇ ಯಬೇಕು. ಆತನೇ ನಮಗೆ ಅಂತಿಮ ಸೌಖ್ಯವನ್ನು ಕೊಡುವನು.

## ೬೫. ಭಗವದ್ಗೀತೆಯ ಅರ್ಥವು.

ಒಬ್ಬ ವೇದಶಾಸ್ತ್ರವಿಶಾರದನಾದ ಪಂಡಿತನು ಭಗವದ್ಗೀತೆಯನ್ನು ಹೇಳುವಾಗ ಅದನ್ನು ಕೇಳಲಿಕ್ಕೆ ಒಬ್ಬಾನೊಬ್ಬ ಅರಸನು ದಿನಾಲು ತಪ್ಪದೆ ಬಂದು ಕೂಡ್ರುತ್ತಿದ್ದನು. ಭಗವದ್ಗೀತೆಯನ್ನು ಓದುವದು ಮುಗಿದ ಬಳಿಕ ಆ ಪಂಡಿತನು ಆ ಅರಸನಿಗೆ-"ರಾಜನೇ, ನಾನು ಇಷ್ಟೊತ್ತಿನ ತನಕ ನಿನ್ನ ಮುಂದೆ ಓದಿದ್ದರ ಅರ್ಥವು ತಿಳಿಯಿತೋ?" ಎಂದು ಕೇಳುತ್ತಿದ್ದನು. ಅದಕ್ಕೆ ಆ ಅರಸನು-"ಸ್ವಾಮಿಗಳೇ, ಇದರ ಅರ್ಥವನ್ನು ನೀವು ಮೊದಲಿಗೆ ತಿಳಿದುಕೊಳ್ಳಿರಿ" ಎಂದು ಉತ್ತರ ಕೊಡುತ್ತಿದ್ದನು. ಪಂಡಿತನು ಭಗವದ್ಗೀತೆಯನ್ನು ಹೇಳುವದು ಮುಗಿಸಿ ತನ್ನ ಮನೆಗೆ ಹೋದ ಬಳಿಕ ದಿನಾಲು ಅರಸನು ತನಗೆ "ನೀವು ಮೊದಲಿಗೆ ಭಗವದ್ಗೀತೆಯ ಅರ್ಥವನ್ನು ತಿಳಿದುಕೊಳ್ಳಿರೆಂದು ಏಕೆ ಹೇಳುತ್ತಿರಬಹುದು?" ಎಂದು ವಿಚಾರ ಮಾಡಲಿಕ್ಕೆ ಹತ್ತಿದನು. ಅವನು ವಿಚಾರಸಂಪನ್ನ ಬ್ರಾಹ್ಮಣನಿದ್ದ ಕಾರಣ ಕೆಲವು ದಿವಸಗಳ ತರುವಾಯ ಅವನಿಗೆ ಪರಮೇಶ್ವರನ ಆರಾಧನೆಯೇ ಮುಖ್ಯವಿರುತ್ತದೆಂದು ತಿಳಿದುಬಂತು. ಆಗಿನಿಂದ ಅವನು ಈ ಜಗತ್ತಿನ ಮೋಹವನ್ನೂ ಸೌಖ್ಯಗಳನ್ನೂ ತೊರೆದು "ಪರಮೇಶ್ವರನಿಗೆ ಆತ್ಮಾರ್ಪಣ ಮಾಡುವದು ಭಗವದ್ಗೀತೆಯ ನಿಜವಾದ ಅರ್ಥವೆಂದು ಈಗ ನನಗೆ ತಿಳಿಯಿತು" ಎಂದು ಅರಸನಿಗೆ ಹೇಳಿ ಕಳುಹಿಸಿದನು.

### ತಾತ್ಪರ್ಯ.

ಜಾಣರು ಸೂಕ್ಷ್ಮವಾದ ರೀತಿಯಿಂದ ಎರಡನೇಯವರ ಸೂಚನೆಗಳನ್ನು ತಿಳಿದುಕೊಂಡು ತಮ್ಮ ಸುಧಾರಣೆಯನ್ನು ಮಾಡಿಕೊಳ್ಳುತ್ತಾರೆ. **ಜಾಣನಿಗೆ ಕಣ್ಣಿನ ಸನ್ನೆ, ಕೋಣನಿಗೆ ಒನಿಕೆಯ ಟೊಣ್ಣೆ** ಎಂಬ ನಾಣ್ಣುಡಿಯು ಪ್ರಸಿದ್ಧವಿರುತ್ತದೆ.

---

## ೬೬. ಒಂದು ದುಡ್ಡಿನ ಬೆಲೆಯ ಜ್ಞಾನವು.

ಒಂದು ಊರಲ್ಲಿ ಇಬ್ಬರು ಅಣ್ಣತಮ್ಮಂದಿರು ಇರುತ್ತಿದ್ದರು. ಅವರಲ್ಲಿ ಹಿರೆಯನು ಮನೆಯನ್ನು ಬಿಟ್ಟು ಹೋಗಿ ಸನ್ಯಾಸಿಯಾದನು. ಮುಂದೆ ಅವನು

ಹನ್ನೆರಡು ವರ್ಷಗಳ ತರುವಾಯ ಮನೆಗೆ ತಿರುಗಿ ಬರಲು ಅವನ ತಮ್ಮನು-"ಅಣ್ಣಾ, ಇಷ್ಟು ದಿವಸ ನೀನು ಮನೆಯನ್ನು ಬಿಟ್ಟು ದೂರ ದೂರ ಅಡ್ಡಾಡಿ ಏನು ಕಲಿತುಕೊಂಡು ಬಂದೆ?" ಎಂದು ಕೇಳಿದನು. ಅದಕ್ಕೆ ಅಣ್ಣನು-"ತಮ್ಮಾ, ನನ್ನ ಸಂಗಡ ಬಾ. ಅದನ್ನು ತೋರಿಸುತ್ತೇನೆ" ಎಂದು ಹೇಳಿ ಅವನನ್ನು ಒಂದು ನದಿಗೆ ಕರೆದುಕೊಂಡು ಹೋಗಿ ಅಲ್ಲಿಯ ನೀರಿನ ಮೇಲಿಂದ ನಡೆದು ಆಚೆಯ ದಂಡೆಗೆ ಹೋಗಿ ಮುಟ್ಟಿದನು. ತಮ್ಮನು ಹರಗೋಲು ನಡೆಸುವ ಅಂಬಿಗರಿಗೆ ಒಂದು ದುಡ್ಡು ಕೊಟ್ಟು ಹರಗೋಲಿನಿಂದ ತಾನೂ ಆಚೆಯ ದಂಡೆಗೆ ಹೋಗಿ ಮುಟ್ಟಿದನು. ಈ ಪ್ರಕಾರ ಇಬ್ಬರೂ ಒಂದೇ ವೇಳೆಗೆ ಆಚೆಯ ದಂಡೆಗೆ ಹೋಗಿ ಮುಟ್ಟಿದ ತರುವಾಯ ತಮ್ಮನು ಅಣ್ಣನಿಗೆ-"ಅಣ್ಣಾ, ಇಷ್ಟು ವರ್ಷ ನೀನು ನಿನ್ನ ದೇಹವನ್ನು ಪರಿಪರಿಯಿಂದ ಕಷ್ಟಪಡಿಸಿ, ಘೋರವಾದ ತಪಶ್ಚರ್ಯವನ್ನು ಮಾಡಿ, ಒಂದು ದುಡ್ಡಿನ ಬೆಲೆಯ ಜ್ಞಾನವನ್ನು ಕಲಿತುಕೊಂಡು ಬಂದೆಯಾ?" ಎಂದು ಅವನಿಗೆ ನಗೆ ಮಾಡಿದನು.

### ತಾತ್ಪರ್ಯ.

ಮಂತ್ರ, ತಂತ್ರ, ಸಿದ್ಧಿ ಇವುಗಳಿಂದ ಏನೂ ಉಪಯೋಗವಿಲ್ಲ. ಪರಮೇಶ್ವರನ ಭಕ್ತಿಯನ್ನು ಮಾಡಿ, ಆತನ ಜ್ಞಾನವನ್ನು ಸಂಪಾದಿಸುವದೇ ಜಗತ್ತಿನಲ್ಲಿ ಮುಖ್ಯವಾದದ್ದು.

---

## ೬೭. ಕಾಮಿನಿ ಕಾಂಚಾಣಗಳ ತ್ಯಾಗವು.

ಸನ್ಯಾಸಾಶ್ರಮಿಗಳು ಕಾಮಿನಿ ಕಾಂಚಾಣಗಳ ತ್ಯಾಗವನ್ನು ಮಾಡಬೇಕೆಂದು ಕಠಿಣವಾದ ನಿರ್ಬಂಧವುಂಟು. ಸನ್ಯಾಸಿಗಳು ಸ್ತ್ರೀಯರ ಚಿತ್ರಗಳನ್ನು ನೋಡಬಾರದು. ಉತ್ತಮ ಮಸಾಲಿ ಹಾಕಿದ ಉಪ್ಪಿನಕಾಯಿಗಳನ್ನು ತಿನ್ನಬಾರದು ಮತ್ತು ಕಣ್ಣಿನಿಂದ ಸಹ ನೋಡಬಾರದು. ಇಷ್ಟೇ ಅಲ್ಲ, ಅವುಗಳ ವಿಚಾರವನ್ನು ಮನಸ್ಸಿನೊಳಗೆ ಏನೂ ತರಬಾರದು. ಒಂದು ವೇಳೆ ತಂದರೆ ಬಾಯಲ್ಲಿ ನೀರು ಬಿಡುತ್ತವೆ. ಆದರೆ ಈ ಕಠಿಣ ನೇಮವು ಗೃಹಸ್ಥಾಶ್ರಮಿಗಳಿಗೆ

ಸಂಬಂಧಿಸಿರುವದಿಲ್ಲ. ಅದು ಕೇವಲ ಸನ್ಯಾಸಿಗಳಿಗೆ ಸಂಬಂಧಿಸಿರುತ್ತದೆ. ಗೃಹಸ್ಥಾಶ್ರಮಿಗಳು ಸ್ತ್ರೀಯರೊಳಗೆ ಇದ್ದರೂ ಅವರು ತಮ್ಮ ಮನಸ್ಸನ್ನು ಸ್ತ್ರೀಯರಲ್ಲಿ ತೊಡಸಗಿದೆ ಪರಮೇಶ್ವರನ ಭಕ್ತಿಯಲ್ಲಿ ತೊಡಗಿಸಿದರೆ ಸಾಕಾಗುವದು. ಗೃಹಸ್ಥಾಶ್ರಮಿಗಳು ತಮ್ಮ ಮನಸ್ಸು ಸ್ತ್ರೀಯರಲ್ಲಿ ತೊಡಗಿಕೊಳ್ಳದೆ ಪರಮೇಶ್ವರನ ಭಕ್ತಿಯಲ್ಲಿ ತೊಡಗಬೇಕೆಂತಲೂ, ಗಂಡಸರನ್ನೂ ಹೆಂಗಸರನ್ನೂ ಬಿಟ್ಟು ದೂರ ಇರುವಂಥ ಏಕಾಂತ ಸ್ಥಳದಲ್ಲಿ ಮೇಲಿಂದ ಮೇಲೆ ಹೋಗಿ ಇರುವದು ಯೋಗ್ಯವು. ಯಾಕಂದರೆ ಅಂಥ ಸ್ಥಳದಲ್ಲಿ ಅವರಿಗೆ ಸಂಸಾರದ ವಿಚಾರವು ಬರಲಿಕ್ಕೆ ಏನೂ ಆಸ್ಪದವಾಗುವದಿಲ್ಲ. ಈ ಪ್ರಕಾರ ಗೃಹಸ್ಥಾಶ್ರಮಿಗಳು ಏಕಾಂತ ಸ್ಥಳದಲ್ಲಿ ಮೂರು ದಿವಸಗಳ ತನಕ, ಅಥವಾ ತಮ್ಮ ಕಡೆಯಿಂದ ಮೂರು ದಿವಸ ಇರುವದು ಆಗದಿದ್ದರೆ ಕನಿಷ್ಠ ಒಂದು ದಿವಸದ ತನಕ, ಹೋಗಿ ಇರುವದಾದಲ್ಲಿ ಅವರಿಂದ ಪರಮೇಶ್ವರನ ಭಕ್ತಿಯೂ ಆರಾಧನೆಯೂ ಹೆಚ್ಚು ಘಟಿಸಿ ಅವರಿಗೆ ಪರಮೇಶ್ವರನ ನಿದಿಧ್ಯಾಸವು ಹತ್ತುವದು. ಗೃಹಸ್ಥಾಶ್ರಮಿಗಳು ತಮಗೆ ಒಬ್ಬಿಬ್ಬರು ಮಕ್ಕಳು ಹುಟ್ಟಿದ ಬಳಿಕ ತಮ್ಮ ಹೆಂಡಂದಿರನ್ನು ಅಕ್ಕತಂಗಿಯರೆಂದು ತಿಳಿದುಕೊಂಡು ಅವರ ಕೂಡ ನಡೆಯಬೇಕು. ಹಾಗೂ ತಮ್ಮಿಬ್ಬರಿಗೂ ಪಾರಮಾರ್ಥಿಕ ಮಾರ್ಗದಿಂದ ಆಯುಷ್ಯಕ್ರಮಣ ಮಾಡಲಿಕ್ಕೆ ಶಕ್ತಿಯನ್ನು ಕೊಡಬೇಕೆಂದು ಪರಮೇಶ್ವರನನ್ನು ನಿರಂತರವಾಗಿ ಬೇಡಿಕೊಳ್ಳಬೇಕು.

## ತಾತ್ಪರ್ಯ.

ಸಾಧುಗಳೂ ಸನ್ಯಾಸಿಗಳೂ ಜಗತ್ತಿನ ಯಾವ ಮೋಹಕ್ಕೂ ಒಳಗಾಗಬಾರದೆಂದು ಅವರಿಗೆ ಕಾಮಿನಿ ಕಾಂಚಾಣಗಳ ಬಗ್ಗೆ ಕಠಿಣ ನಿರ್ಬಂಧವು ಮಾಡಲ್ಪಟ್ಟಿರುವದು. ಹಾಗೂ ಅವರ ಭೋಜನದ ಬಗ್ಗೆ ಸಹ ನಿರ್ಬಂಧವು ಮಾಡಲ್ಪಟ್ಟಿರುವದು. ಅವರು ಒಂದೇ ಹೊತ್ತು ಭೋಜನ ಮಾಡಬೇಕೆಂತಲೂ ಅವರು ಮೃಷ್ಟಾನ್ನ ಭೋಜನವನ್ನು ಮಾಡಬಾರದೆಂತಲೂ ನಿರ್ಬಂಧವಿರುತ್ತದೆ. ಪಕ್ವಾನ್ನಗಳಿಗೆ ಮೆಚ್ಚಿದ ಸಾಧುಗಳ ಮತ್ತು ಸನ್ಯಾಸಿಗಳ ಚಿತ್ತವು ಪಲ್ಲಟವಾಗಿ ಸ್ತ್ರೀಯರ ಕಡೆಗೆ ಹೋಗುವದು ಸ್ವಾಭಾವಿಕವಿರುತ್ತದ. ಆದುದರಿಂದ ಸಾಧುಗಳು ಮತ್ತು ಸನ್ಯಾಸಿಗಳು ಅರಣ್ಯದಲ್ಲಿ ಏಕಾಂತವಾಗಿ

ಇರುವದು ಉತ್ತಮ ಪಕ್ಷವು. ಅವರಿಗೆ ಜಗತ್ತಿನ ಮೋಹವು ಬಿಡದಂತೆ ಇದ್ದರೆ ಅವರು ಸಾಧುಗಳು ಮತ್ತು ಸನ್ಯಾಸಿಗಳು ಆಗುವ ಪ್ರಯೋಜನವಾದರೂ ಏನು?

---

# ೬೮. ಮಾದಿಗನ ಬುದ್ಧಿಚಾತುರ್ಯವು.

ಒಬ್ಬ ಮಾದಿಗನು ಒಂದು ತಕ್ಕಡಿಯ ಎರಡು ಪರಡಿಗಳಲ್ಲಿ ದನಗಳ ಮಾಂಸ ತುಂಬಿದ ಎರಡು ಪುಟ್ಟಿಗಳನ್ನು ಇಟ್ಟುಕೊಂಡು ಬರುವಾಗ ಗಂಗಾ ನದಿಯೊಳಗೆ ಸ್ನಾನ ಮಾಡಿಕೊಂಡು ಮಡಿಯಿಂದ ಬರುತ್ತಿದ್ದ ಶಂಕರಾಚಾರ್ಯರೆಂಬ ಸ್ವಾಮಿಗಳನ್ನು ಮುಟ್ಟಿದನು. ಆದರಿಂದ ಆ ಸ್ವಾಮಿಗಳು ಸಿಟ್ಟಿಗೆದ್ದು—“ಎಲೋ ಅಧಮಾ, ನೀನು ನನಗೆ ಮುಟ್ಟಿದೆ!” ಎಂದು ಅವನಿಗೆ ದೊಡ್ಡ ಧ್ವನಿಯಿಂದ ಬೈದರು. ಆಗ ಆ ಮಾದಿಗನು—“ಗುರುಗಳೇ, ನಾನು ತಮ್ಮನ್ನು ಮುಟ್ಟಲಿಲ್ಲ ಅಥವಾ ತಾವು ನನ್ನನ್ನು ಮುಟ್ಟಲಿಲ್ಲ. ತಾವು ಚನ್ನಾಗಿ ವಿಚಾರ ಮಾಡಿ ತಮ್ಮ ನಿಜ ಸ್ವಯಂಭುವು ತಮ್ಮ ದೇಹವಾಗಲಿ, ಮನಸ್ಸಾಗಲಿ, ಜ್ಞಾನವಾಗಲಿ ಇರುತ್ತದೋ ಹೇಗೆ? ಹಾಗೂ ತಾವು ನಿಜವಾಗಿ ಏನಿರುವಿರಿ? ಎಂಬುವದನ್ನು ನನಗೆ ಹೇಳಿರಿ. ತಮ್ಮ ಆತ್ಮವು ಪರಮೇಶ್ವರನ ಕಡೆಗೆ ಕರೆದೊಯ್ಯುವ ಸತ್ವಗುಣದಲ್ಲಿಯಾಗಲಿ, ಕರ್ಮವನ್ನು ಮಾಡಿಸುವ ರಜಸ್ಸಿನಲ್ಲಿಯಾಗಲಿ, ಜ್ಞಾನಪ್ರಕಾಶದಿಂದ ದೂಡಿ ಹಾಕುವ ತಮಸ್ಸಿನಲ್ಲಿಯಾಗಲಿ, ಇರುವದಿಲ್ಲವೆಂಬುವದು ತಮಗೆ ಗೊತ್ತಿಲ್ಲವೇ?” ಎಂದು ನುಡಿದನು. ಇದನ್ನು ಕೇಳಿ ಸ್ವಾಮಿಗಳು ಸುಮ್ಮನೆ ಹೊರಟುಹೋದರೆಂದು ಹೇಳುವದು ಕಾರಣವಿಲ್ಲ.

## ತಾತ್ಪರ್ಯ.

ಬುದ್ಧಿಯಾಗಲಿ, ಜ್ಞಾನವಾಗಲಿ, ಜಾತಿಯನ್ನು ಅವಲಂಬಿಸಿರುವದಿಲ್ಲ. ಜಾತಿಯನ್ನು ಮನುಷ್ಯನು ನಿರ್ಮಾಣ ಮಾಡಿರುವನಲ್ಲದೆ ದೇವರು ನಿರ್ಮಾಣ ಮಾಡಿರುವದಿಲ್ಲ. ಆದುದರಿಂದ ಬುದ್ಧಿ ಜ್ಞಾನಗಳು ಯಾರಲ್ಲಿದ್ದರೂ ಅವುಗಳನ್ನು ನಾವು ಮಾನ್ಯ ಮಾಡತಕ್ಕದ್ದು.

---

# ೭೯. ನಿರಕ್ಷರಿಯಾದ ಜ್ಞಾನಿಯು.

ಚೈತನ್ಯದೇವನು ಒಂದು ಸಾರೆ ದಕ್ಷಿಣ ಹಿಂದುಸ್ಥಾನದ ಕಡೆಗೆ ತೀರ್ಥಯಾತ್ರೆಗಳನ್ನು ಮಾಡಿಕೊಂಡು ಬರಲಿಕ್ಕೆ ಹೋದಾಗ ಒಬ್ಬ ಪಂಡಿತನು ಭಗವದ್ಗೀತೆಯನ್ನು ಓದುವ ಕಾಲಕ್ಕೆ ಒಬ್ಬಾನೊಬ್ಬ ಭಕ್ತನ ಕಣ್ಣೊಳಗಿಂದ ಅಶ್ರುಗಳು ಹರಿಯುವದನ್ನು ನೋಡಿದನು. ಆ ಭಕ್ತನಿಗೆ ಭಗವದ್ಗೀತೆಯೊಳಗಿನ ಒಂದೂ ಶ್ಲೋಕವು ಗೊತ್ತಿದ್ದಿಲ್ಲ. ಇಷ್ಟೇ ಅಲ್ಲ, ಅವನಿಗೆ ಅಕ್ಷರಗಳ ಜ್ಞಾನವು ಸಹ ಇದ್ದಿಲ್ಲ. ಆಗ ಚೈತನ್ಯನು ಅವನಿಗೆ–"ನೀನು ಏಕೆ ಕಣ್ಣೀರು ಉದುರಿಸುತ್ತೀ?" ಎಂದು ಕೇಳಿದನು. ಆಗ ಅವನು–"ಗೀತೆಯೊಳಗಿನ ಒಂದೂ ಶಬ್ದವು ನನಗೆ ತಿಳಿಯುವದಿಲ್ಲೆಂಬುವದು ನಿಜವು. ಆದರೆ ನನ್ನ ಅಂತರ್ದೃಷ್ಟಿಯ ಮುಂದೆ ಕುರುಕ್ಷೇತ್ರದ ರಣಾಂಗಣದಲ್ಲಿ ಅರ್ಜುನನ ರಥದೊಳಗೆ ಅವನ ಸಾರಥಿಯಾಗಿ ಕುಳಿತುಕೊಂಡು ಅವನಿಗೆ ಗೀತೋಪದೇಶವನ್ನು ಮಾಡುತ್ತಿರುವ ಶ್ಯಾಮಸುಂದರ ಮೂರ್ತಿಯಾದ ಶ್ರೀಕೃಷ್ಣನು ಸ್ಪಷ್ಟವಾಗಿ ಕಾಣಿಸುತ್ತಿರುವನು. ಆದುದರಿಂದ ನನ್ನ ಕಣ್ಣೊಳಗಿಂದ ಆನಂದಾಶ್ರುಗಳೂ ಪ್ರೇಮಾಶ್ರುಗಳೂ ಸುರಿಯುಹತ್ತಿವೆ" ಎಂದು ಉತ್ತರಕೊಟ್ಟನು.

## ತಾತ್ಪರ್ಯ.

ಪರಮೇಶ್ವರನು ಸಾಕ್ಷರಿಗಳು, ನಿರಕ್ಷರಿಗಳು, ಶ್ರೀಮಂತರು, ಬಡವರು, ಬ್ರಾಹ್ಮಣರು, ಬ್ರಾಹ್ಮಣೇತರರು ಇವರೆಲ್ಲರ ಮೇಲೆ ಸಮನಾಗಿಯೇ ಪ್ರೀತಿ ಮಾಡುತ್ತಾನೆ. ಆತನು ಎಂದೂ ಯಾವದೂ ತರದ ಭೇದವನ್ನು ಮಾಡುವದಿಲ್ಲ. ತನ್ನನ್ನು ಭಕ್ತಿಯಿಂದ ಆರಾಧಿಸುವವರಿಗೆ ಆತನು ಪ್ರಸನ್ನನಾಗುತ್ತಾನೆ.

**ಯೇ ಯಥಾಮಾಂ ಪ್ರಪದ್ಯಂತೆ ತಾಂಸ್ತಥೈವ ಭಜಾಮ್ಯಹಂ ॥**

ಎಂದು ಭಗವಂತನ ಉಕ್ತಿಯುಂಟು. ಯಾರು ಆತನ ಮೇಲೆ ಯಾವ ರೀತಿಯಿಂದ ಭಕ್ತಿಯನ್ನು ಮಾಡುತ್ತಾರೋ ಆ ಪ್ರಕಾರ ಅವನು ಅವರಿಗೆ ಫಲವನ್ನು ಕೊಡುವನು.

# ೭೦. ನಿನ್ನ ಮನೆಯೇ ಗೋಕುಲ ವೃಂದಾವನವು.

ಒಬ್ಬ ಮುದುಕಿಯು ಇನ್ನುಮೇಲೆ ತಾನು ಈ ಪ್ರಪಂಚವನ್ನು ಬಿಟ್ಟು ತನ್ನ ಆಯುಷ್ಯದ ಕೊನೆಯ ದಿವಸಗಳನ್ನು ಗೋಕುಲ ವೃಂದಾವನದಲ್ಲಿದ್ದು ಕೊಂಡು ಶಾಂತ ರೀತಿಯಿಂದ ಕಳೆಯಬೇಕೆಂದು ಅಪೇಕ್ಷಿಸಿ ತನ್ನ ಅಪೇಕ್ಷೆಯನ್ನು ಭಗವಾನರ ಮುಂದೆ ತಿಳುಹಿಸಿದಳು. ಆಗ ಭಗವಾನರು ಅವಳಿಗೆ ಹೇಳಿದ್ದೇನಂದರೆ:—

“ನಿನಗೆ ನಿನ್ನ ಮಗನ ಚಿಕ್ಕ ಮಗಳ ಮೇಲೆ ಬಹಳ ಪ್ರೀತಿಯುಂಟು. ನೀನು ಎಲ್ಲಿ ಹೋದರೂ ಆ ಕೂಸು ನಿನ್ನ ಹತ್ತರ ಇಲ್ಲದಿದ್ದರೆ ನಿನಗೆ ಅದರ ನೆನವು ಆಗಿ ಬಹಳ ಕಸವಿಸಿಯಾಗುವದು. ನಿನ್ನ ಮನಸ್ಸಿಗೆ ಬಂದರೆ ನೀನು ವೃಂದಾವನದಲ್ಲಿ ಹೋಗಿ ಇರು. ಆದರೆ ನೀನು ಅಲ್ಲಿ ಇದ್ದರೂ ನಿನ್ನ ಮನಸ್ಸು ಮಾತ್ರ ನಿನ್ನ ಮನೆಯ ಸುತ್ತಲು ಸುಳಿದಾಡುವದು. ಅದುದರಿಂದ ನೀನು ನಿನ್ನ ಮನೆಯಲ್ಲಿಯೇ ಇದ್ದುಕೊಂಡು ನಿನ್ನ ಮಗಳೇ ಪ್ರತ್ಯಕ್ಷ ಶ್ರೀರಾಧೆಯೆಂದು ತಿಳಿದು ಅವಳ ಮೇಲೆ ಪ್ರೀತಿ ಮಾಡಿದರೆ ನಿನಗೆ ವೃಂದಾವನದಲ್ಲಿದ್ದ ಸೌಖ್ಯವೂ ಶಾಂತಿಯೂ ಉಂಟಾಗುವವು. ಆ ಕೂಸಿಗೆ ನೀನು ಬೇಕಾದಷ್ಟು ಮುದ್ದು ಕೊಡು. ಅದಕ್ಕೆ ನೀನು ನಿನ್ನ ಮನದಣಿಯುವಂತೆ ಉಣ್ಣಿಸು, ತಿನ್ನಿಸು, ತರ ತರದ ಸುಂದರವಾದ ಅರಿವೆಗಳನ್ನು ಹೊದಿಸು. ಆದರೆ ಇದನ್ನೆಲ್ಲ ಮಾಡುವಾಗ ನೀನು ಯಾವಾಗಲು ವೃಂದಾವನದ ದೇವತೆಯನ್ನೇ ಪೂಜಿಸುತ್ತೇನೆಂದು ತಿಳಿದುಕೋ. ಅಂದರೆ ನಿನ್ನ ಮನಸ್ಸಿಗೆ ಯೋಗ್ಯ ಶಾಂತಿಯು ಸಿಗುವದು.

## ತಾತ್ಪರ್ಯ.

“ನಮ್ಮ ಮನಸ್ಸೇ ಕಾಶಿಯು ಮತ್ತು ಅಲ್ಲಿಯೇ ಶ್ರೀವಿಶ್ವೇಶ್ವರನು ಇರುಸ್ಥಾನ” ಎಂದು ತಿಳಿದುಕೊಳ್ಳುವಂಥ ಜನರು ಕೆಲವರು ಇರುತ್ತಾರೆ. ಆದರೆ ಈ ಪ್ರಕಾರ ತಿಳಿದುಕೊಳ್ಳುವವರು ಇದ್ದಾಗ್ಯೂ ಭಗವಂತನ ಮೇಲೆ ಅಚಲವಾದ ಭಕ್ತಿಯನ್ನಿಡುವವರು ಬಹಳ ವಿರಳ. ಆದುದರಿಂದ ತೀರ್ಥಯಾತ್ರೆಗ

ಳನ್ನು ಮಾಡಿದರೆ ಮನಸ್ಸು ಸ್ವಾರ್ಥಪರವಾದ ಮತ್ತು ಪಾಪಮಯವಾದ ಸಂಸಾರದ ವಿಚಾರಗಳನ್ನು ಕೆಲವು ದಿವಸಗಳ ಮಟ್ಟಿಗಾದರೂ ಬಿಟ್ಟು ಇರುವದು. ತೀರ್ಥಯಾತ್ರೆಗಳಿಗೆ ಹೋಗಿ ಅಲ್ಲಿ ಹೆಂಡರು ಮಕ್ಕಳನ್ನು ಅಥವಾ ವೇಶ್ಯಾಸ್ತ್ರೀಯರನ್ನು ನೆನಪು ಮಾಡಿಕೊಳ್ಳುತ್ತ ಕಾಲಕಳೆಯುವವರಿಗೆ ಕ್ಷೇತ್ರಗಳಿಗೆ ಹೋದ ಮತ್ತು ದೇವದರ್ಶನ ಮಾಡಿಕೊಂಡ ಪುಣ್ಯವು ಎಂದೂ ಲಭಿಸಲಾರದು.

---

## ೭೧. ಇಬ್ಬರು ಮಿತ್ರರು.

ಒಂದಾನೊಂದು ದಿವಸ ಸಾಯಂಕಾಲದಲ್ಲಿ ಇಬ್ಬರು ಮಿತ್ರರು ಅಡ್ಡಾಡಲಿಕ್ಕೆ ಹೊರಟಿರಲು ದಾರಿಯಲ್ಲಿ ಒಂದು ಕಡೆಗೆ ಭಾಗವತದ ಪುರಾಣವು ನಡೆದಿತ್ತು. ಆಗ ಆ ಇಬ್ಬರು ಮಿತ್ರರಲ್ಲಿ ಒಬ್ಬನು–“ಮಿತ್ರಾ, ಭಾಗವತವನ್ನು ಕೇಳಲಿಕ್ಕೆ ತುಸು ಹೊತ್ತು ಕುಳಿತುಕೊಳ್ಳೋಣ ನಡೆ” ಎಂದು ಹೇಳಿ ಅಲ್ಲಿ ಹೋಗಿ ಕುಳಿತುಕೊಂಡನು. ಆದರೆ ಇನ್ನೊಬ್ಬನು ಅಲ್ಲಿ ಸ್ವಲ್ಪ ಹಣಿಕಿ ಹಾಕಿ, ಆ ಸ್ಥಳವನ್ನು ಕೂಡಲೆ ಬಿಟ್ಟುಕೊಟ್ಟು, ಒಂದು ವೇಶ್ಯಾಗೃಹದಲ್ಲಿ ನಡೆದಿದ್ದ ಸಂಗೀತವನ್ನು ಕೇಳಲಿಕ್ಕ ಹೋದನು. ಅಲ್ಲಿ ಅವನಿಗೆ ಬೇಗನೆ ಬೇಸರಿಕೆಯು ಬಂದು–“ಛೇ, ನಾನು ಇಲ್ಲಿ ಬರತಕ್ಕದ್ದಿದ್ದಿಲ್ಲ. ನನಗೆ ಧಿಕ್ಕಾರವಿರಲಿ. ನನ್ನ ಗೆಳೆಯನು ಭಾಗವತವನ್ನು ಕೇಳಲಿಕ್ಕೆ ಹೋಗಿ ಭಗವಂತನ ನಾಮಸಂಕೀರ್ತನವನ್ನು ಕೇಳುತ್ತ ಆನಂದವನ್ನು ಪಡುತ್ತಿರಬಹುದು. ನಾನೆಂಥ ಅರಿಷ್ಟ ಸ್ಥಳಕ್ಕೆ ಬಂದೆನು?” ಎಂದು ಪಶ್ಚಾತ್ತಾಪಪಟ್ಟನು. ಆದರೆ ಭಾಗವತವನ್ನು ಕೇಳಲಿಕ್ಕೆ ಕುಳಿತವನು ಭಾಗವತವನ್ನು ಕೇಳುವದರಿಂದ ಬೇಸತ್ತು–“ನಾನೆಂಥ ಮೂರ್ಖನು? ಈ ಪುರಾಣಿಕನು ಏನು ಒಣ ರಗಳೆಯನ್ನು ಹಚ್ಚಿರುತ್ತಾನೆ? ನನ್ನ ಮಿತ್ರನು ಪಾತರದವರ ಸಂಗೀತವನ್ನು ಕೇಳುತ್ತ ಎಷ್ಟು ಆನಂದದಲ್ಲಿ ಕುಳಿತಿರಬಹುದು?” ಎಂದು ಅಲ್ಲಿಂದ ಹೊರಟು ಹೋದನು. ಈ ಇಬ್ಬರೂ ಸತ್ತ ಮೇಲೆ ಭಾಗವತನ್ನು ಕೇಳಲಿಕ್ಕೆ ಹೋಗಿ ಪಶ್ಚಾತ್ತಾಪ ಹೊಂದಿದವನನ್ನು ಯಮಕಿಂಕರರು ಯಮಲೋಕಕ್ಕೆ ಕರೆದುಕೊಂಡು ಹೋದರು. ಆದರೆ ಪಾತರದ

ಕಲಿಯಬಹುದು. ಈ ಜಗತ್ತು ಪರಮೇಶ್ವರನ ಮಹಾವಿದ್ಯಾಲಯವಿರುತ್ತದೆ. ಅದರಲ್ಲಿ ಯಾವದೇ ಜೀವರಾಶಿಯಿಂದ ಅಥವಾ ಯಾವದೇ ವಸ್ತುವಿನಿಂದ ಒಂದಿಲ್ಲೊಂದು ತರದ ಉಪದೇಶವು ಸಿಗುವದು. ನಾವು ಯಾವದನ್ನೂ ಧಿಕ್ಕರಿಸಲಾಗದು. ಹೀಗಿದ್ದು ಅಹಂಕಾರಿಯಾದ ಮನುಷ್ಯನು ತಾನು ಶ್ರೇಷ್ಠನೆಂಬ ಸೊಕ್ಕಿನಿಂದ ಮೆರೆಯುತ್ತಾನೆ.

---

## ೭೪. ಚೇಷ್ಟೆಯು ಸಂಕಟದ ಮೂಲವು.

ಒಬ್ಬ ಮನುಷ್ಯನು ಬಹಳ ಸಾಲದಲ್ಲಿ ಮುಳುಗಿದ್ದನು. ಆದುದರಿಂದ ಅವನು ಸಾವುಕಾರರ ಸಾಲದ ಹೊಣೆಯನ್ನು ತಪ್ಪಿಸಿಕೊಳ್ಳುವದಕ್ಕಾಗಿ ಹುಚ್ಚನಂತೆ ಎಡ್ಡು ಮಾಡಹತ್ತಿದನು. ಎಷ್ಟೋ ಮಂದಿ ವೈದ್ಯರು ಅವನಿಗೆ ಔಷಧವನ್ನು ಕೊಟ್ಟರು. ಆದರೆ ಒಬ್ಬರಿಂದಲೂ ಅವನಿಗೆ ಗುಣವಾಗಲಿಲ್ಲ. ವೈದ್ಯರು ಅವನಿಗೆ ಔಷಧ ಕೊಟ್ಟಂತೆ ಅವನ ಹುಚ್ಚು ಹೆಚ್ಚಾಗಹತ್ತಿತು. ಕಡೆಗೆ ಒಬ್ಬ ಬುದ್ಧಿವಂತ ವೈದ್ಯನು ಅವನು ಹುಚ್ಚನಂತೆ ಎಡ್ಡು ಮಾಡುವದನ್ನು ಕಂಡು ಹಿಡಿದು ಅವನನ್ನು ಒಂದು ಮಗ್ಗಲಿಗೆ ಕರೆದು–"ಅಪ್ಪಾ, ನೀನು ಇದೇನು ಮಾಡುತ್ತಿರುವೆ? ನೀನು ಈ ಪ್ರಕಾರ ಹುಚ್ಚನಂತೆ ಎಡ್ಡು ಮಾಡಲಿಕ್ಕೆ ಹತ್ತಿದರೆ ಕೆಲವು ದಿವಸಗಳ ತರುವಾಯ ನಿಜವಾಗಿಯೂ ಹುಚ್ಚನಾಗುವೆ. ಈಗಲೇ ನಿನ್ನಲ್ಲಿ ನಿಜವಾದ ಹುಚ್ಚನ ಚಿಹ್ನಗಳು ಕೆಲವು ಬಂದಿರುತ್ತವೆ" ಎಂದು ಸಿಟ್ಟು ಮಾಡಿದನು. ಈ ಉಪದೇಶವು ಆ ಮನುಷ್ಯನ ಮನಸ್ಸಿಗೆ ಚನ್ನಾಗಿ ಹತ್ತಿ ಅವನು ಬೇಗನೆ ಎಚ್ಚರಿಕೆಯ ಮೇಲೆ ಬಂದು ಹುಚ್ಚುತನದ ಎಡ್ಡು ಮಾಡುವದನ್ನು ಬಿಟ್ಟುಕೊಟ್ಟನು.

### ತಾತ್ಪರ್ಯ.

ನಾಟಕದಲ್ಲಿ ಸ್ತ್ರೀಯರ ಭೂಮಿಕೆಯನ್ನು ತೆಗೆದುಕೊಳ್ಳುವವರು ಕೆಲವು ದಿವಸಗಳ ರೂಢಿಯಿಂದ ನಾಟಕದ ಹೊರಗೂ ಸ್ತ್ರೀಯರಂತೆ ಮಾತಾಡುವದನ್ನು ಅನೇಕರು ನೋಡಿರಬಹುದು. ಆದುದರಿಂದ ನಾವು ಯಾವದಾದರೂ

ರೂಢಿಯನ್ನು ಮಾಡಿಕೊಳ್ಳುವ ಮುಂಚೆ ಆ ರೂಢಿಯ ಇಷ್ಟಾನಿಷ್ಟಗಳನ್ನೂ, ಒಳಿತುಕೆಡಕುಗಳನ್ನೂ ಚನ್ನಾಗಿ ವಿಚಾರ ಮಾಡಬೇಕು. ಚೇಷ್ಟೆಯಿಂದ ಜಡ್ಡು ಬಿದ್ದಂತೆ ಅಳುವದು ಅಥವಾ ನೆರಳುವದು, ಮೂಕನಂತೆ ಕೈಸನ್ನೆ ಬಾಯಿಸನ್ನೆಗಳನ್ನು ಮಾಡುವದು, ಹೆಂಗಸರಂತೆ ಅಥವಾ ಹುಚ್ಚರಂತೆ ಮಾತಾಡುವದು ಇವು ಯಾವಾಗಲು ಕೆಡಕು. ಒಮ್ಮೆ ಚೇಷ್ಟೆಯಿಂದ ಮಾಡಲಿಕ್ಕೆ ಆರಂಭವಾದದ್ದು ರೂಢಿಯಾಯಿತೆಂದರೆ ಮನುಷ್ಯನು ಅದರಂತೆಯೇ ಕಡೆಗೂ ಮಾಡುತ್ತ ಕೇಡನ್ನು ಅನುಭೋಗಿಸುವನು.

---

## ೭೫. ಇರಿವೆಗಳ ಸುಖಸ್ವಪ್ನವು.

ಒಂದು ಸಾರೆ ಕೆಲವು ಇರಿವೆಗಳು ಒಂದು ಸಕ್ಕರಿಯ ಗುಡ್ಡಕ್ಕೆ ಬಂದವು. ಅವುಗಳಿಗೆ ಆ ಗುಡ್ಡವು ದೊಡ್ಡದಿರುವದೆಂಬುವದು ತಿಳಿಯಲಿಲ್ಲ. ಅವು ಆ ಗುಡ್ಡದಲ್ಲಿಯ ಕೆಲವು ಸಕ್ಕರಿಯ ಚೂರುಗಳನ್ನು ತಿಂದು ಬಹಳ ತೃಪ್ತಿಬಟ್ಟು ತಾವು ಹೋಗುವಾಗ ತಮ್ಮ ಮನೆಗೆ ಒಂದೊಂದು ಎರಡೆರಡು ಚೂರುಗಳನ್ನು ತೆಗೆದುಕೊಂಡು ಹೋದವು. ಅವು ಈ ಪ್ರಕಾರ ತಮ್ಮ ಮನೆಗೆ ಹೋಗುವಾಗ ತಾವು ಇಡೀ ಗುಡ್ಡವನ್ನೇ ಹೊತ್ತುಕೊಂಡು ಹೋದೆವೆಂದು ತಿಳಿದುಕೊಂಡವು! ಪಾಪ! ಮನುಷ್ಯನ ಸ್ಥಿತಿಯಾದರೂ ಇದೇ ಪ್ರಕಾರ ಇರುತ್ತದೆ. ಪರಮೇಶ್ವರನ ಜ್ಞಾನವನ್ನು ಪೂರ್ಣವಾಗಿ ಮಾಡಿಕೊಂಡವರು ಬಹಳ ಸ್ವಲ್ಪ ಮಂದಿ ಪುಣ್ಯವಂತರು ದೊರಕುವರು. ಅದು ಎಲ್ಲರಿಗೂ ಸಾಧ್ಯವಿರುವದಿಲ್ಲ. ಹೀಗಿದ್ದು ದುರ್ದೈವದಿಂದ ಅನೇಕರು ತಮಗೆ ಪರಮೇಶ್ವರನ ಜ್ಞಾನವು ಪೂರ್ಣವಾಗಿ ಆಗಿರುತ್ತದೆಂಬ ಭ್ರಾಮಕ ಕಲ್ಪನೆಯನ್ನು ಮಾಡಿಕೊಂಡಿರುತ್ತಾರೆ. ಹಿಮಾಲಯದಂಥ ದೊಡ್ಡ ಸಕ್ಕರಿಯ ಗುಡ್ಡವನ್ನು ತಾವು ಎತ್ತಿಕೊಂಡು ಬಂದೆವೆಂಬ ಅಸಂಭವವಾದ ಕಲ್ಪನೆಯನ್ನು ಇರಿವೆಗಳು ಮಾಡಿಕೊಂಡಂತೆಯೇ ಅವರು ತಾವು ಬ್ರಹ್ಮನನ್ನು ಪೂರ್ಣವಾಗಿ ತಿಳಿದುಕೊಂಡಿರುತ್ತೇವೆಂಬ ಕಲ್ಪನೆಯನ್ನು ಮಾಡಿಕೊಳ್ಳುವದು ಹುಚ್ಚುತನವು.

### ತಾತ್ಪರ್ಯ.

ನಾವು ನಮ್ಮ ಶಕ್ತಿಯ ಪ್ರಕಾರ ನಮ್ಮ ತಿಳುವಳಿಕೆಯನ್ನು ಮಾಡಿಕೊಳ್ಳಬೇಕು. ಆಕಾಶದಲ್ಲಿ ಹಾರುವ ಹಾಳೀಹದ್ದು ತಾನು ಸೂರ್ಯನನ್ನು ಮುಟ್ಟಿ ಬಂದೆನೆಂದು ಹೇಳುವದೂ, ಮನುಷ್ಯನು ತನಗೆ ಪರಮೇಶ್ವರನ ಪೂರ್ಣ ಜ್ಞಾನವಾಗಿರುತ್ತದೆಂದು ಹೇಳುವದೂ ಒಂದೇ.

---

## ೭೬. ವಿಧೇಯತ್ವವು ಮತ್ತು ಅವಿಧೇಯತ್ವವು.

ದೇವರಿಗೆ ವಿಧೇಯರಾಗುವ ಸಲುವಾಗಿ ಗುರುಹಿರಿಯರಿಗೆ ಅವಿಧೇಯರಾಗಿ ನಡೆದರೂ ಪಾಪವೆನಿಸುವದಿಲ್ಲ. ಭರತನು ಶ್ರೀರಾಮನ ಸಲುವಾಗಿ ತನ್ನ ತಾಯಿಯಾದ ಕೈಕೆಯಿಯ ಮಾತನ್ನು ಮೀರಿದನು. ಗೋಪಿಯರು ಶ್ರೀಕೃಷ್ಣನ ಸಲುವಾಗಿ ತಮ್ಮ ಗಂಡಂದಿರ ಮಾತನ್ನು ಮೀರಿದರು ಪ್ರಹ್ಲಾದನು ಶ್ರೀವಿಷ್ಣುವಿನ ಸಲುವಾಗಿ ತನ್ನ ತಂದೆಯಾದ ಹಿರಣ್ಯಕಶ್ಯಪುವಿನ ಮಾತನ್ನು ಮೀರಿದನು. ವಾಲಿಯು ಪರಮಾತ್ಮನನ್ನು ಸಂತೋಷಪಡಿಸುವ ಸಲುವಾಗಿ ತನ್ನ ಗುರುವಾದ ಶುಕ್ರಾಚಾರ್ಯನ ಮಾತು ಮೀರಿದನು. ವಿಭೀಷಣನು ಶ್ರೀರಾಮನ ಕೃಪೆಯನ್ನು ಸಂಪಾದಿಸುವ ಸಲುವಾಗಿ ತನ್ನ ಅಣ್ಣನಾದ ರಾವಣನ ಮಾತನ್ನು ಮೀರಿದನು.

### ತಾತ್ಪರ್ಯ.

ತಾಯಿತಂದೆಗಳಿಗೂ, ಗುರುಗಳಿಗೂ, ಅರಸರಿಗೂ ಯಾವಾಗಲು ಮನ್ನಣೆಯನ್ನು ಮಾಡಬೇಕು. ಆದರೆ ತಾಯಿತಂದೆಗಳು, ಬಂಧುಗಳು, ಗುರುಗಳು ಮತ್ತು ಅರಸರು ದೇವರಿಗಿಂತಲು ಶ್ರೇಷ್ಠರಲ್ಲ. ಆದುದರಿಂದ ಪರಮಾತ್ಮನ ಆಜ್ಞೆಯನ್ನು ಪಾಲಿಸುವದಕ್ಕಾಗಿಯೂ, ಪರಮಾತ್ಮನಿಗೆ ಮೆಚ್ಚಿಗೆಯಾಗುವಂಥ ಕಾರ್ಯಗಳನ್ನು ಮಾಡುವದಕ್ಕಾಗಿಯೂ ಅವರ ಅಪ್ಪಣೆಯನ್ನು ಮೀರುವದು ಸಹ ಪಾಪವೆನಿಸಲಾರದು.

---

## ೭೭. ಜಗನ್ಮಾತೆಯು ಎಲ್ಲವು ಇರುವಳು; ಹಾಗು ಎಲ್ಲವನ್ನು ಮಾಡುವಳು.

ನನಗೆ ಯಾರು ಕಲಿಸುತ್ತಾರೆ? ನಾನು ಏನು ಓದಿರುತ್ತೇನೆ? ನನಗೇನು ಗೊತ್ತಿರುತ್ತದೆ? ಎಲೈ ತಾಯೀ, ನಾನು ಯಂತ್ರವು; ನೀನು ಯಂತ್ರಿಯು ಅಂದರೆ ಅದನ್ನು ನಡೆಸುವವಳು. ನಾನು ಕೋಣೆಯು; ನೀನು ಅದರಲ್ಲಿ ವಾಸ ಮಾಡುವ ಒಕ್ಕಲು. ನಾನು ಕತ್ತಿಯ ಮೇಲಿನ ವರಿಯು; ನೀನು ಕತ್ತಿಯು. ನಾನು ರಥವು; ನೀನು ರಥವನ್ನು ನಡೆಸುವ ಸಾರಥಿಯು. ನೀನು ನನಗೆ ಮಾಡಿಸುವಂತೆ ನಾನು ಮಾಡುತ್ತೇನೆ. ನೀನು ನನಗೆ ಮಾತಾಡಿಸುವಂತೆ ನಾನು ಮಾತಾಡುತ್ತೇನೆ. ನನ್ನ ಅಂತರ್ಯಾಮಿಯಾಗಿರುವ ನೀನು ನಡೆಸುವಂತೆ ನಾನು ನಡೆಯುತ್ತೇನೆ. ನೀನೇ ಎಲ್ಲವು ಇರುತ್ತೀ. ನೀನೇ ಎಲ್ಲವನ್ನು ಮಾಡಿಸುತ್ತೀ.

### ತಾತ್ಪರ್ಯ.

ಮನುಷ್ಯರು ಏನಾದರೊಂದು ಕೆಲಸ ಮಾಡಿದ ಕೂಡಲೆ ತಾವು ಮಾಡಿದೆವೆಂದು ತಿಳಿಯುತ್ತಾರೆ. ಆದರೆ ಅದು ತೀರ ತಪ್ಪು. ದೇವರೇ ಮಾಡುವವನು ಮತ್ತು ಮಾಡಿಸುವವನು. ಅವನೇ ಈ ವಿಶ್ವದ ಸೂತ್ರಧಾರನು. ಅವನು ಜಗ್ಗಿದಂತೆ ನಾವು ಅವನ ಕೈಕೆಳಗಿನ ಸೂತ್ರದ ಗೊಂಬೆಗಳಾಗಿ ಕುಣಿಯುತ್ತೇವೆ.

---

## ೭೮. ಮನಸ್ಸಿನ ಸ್ವತಂತ್ರತೆಯನ್ನು ಇಡಬೇಕು.

ಮನಸ್ಸೇ ಮನುಷ್ಯನ ಸಕಲ ಸಂಪತ್ತು ಇರುತ್ತದೆ. ಅವನು ತನ್ನ ಮನಸ್ಸಿನ ಸ್ವಾತಂತ್ರ್ಯವನ್ನು ಕಳೆದುಕೊಂಡರೆ ತನ್ನನ್ನೇ ತಾನು ಕಳೆದುಕೊಂಡಂತೆ ಆಗುತ್ತದೆ. ಅವನು ತನ್ನ ಮನಸ್ಸನ್ನು ಸ್ವತಂತ್ರವಾಗಿ ಇಟ್ಟುಕೊಂಡರೆ ತಾನೂ ಸ್ವತಂತ್ರನಾಗಿ ಉಳಿಯುವನು. ಗಂಜೀ ಮಾಡಿದ ಬಿಳೀ ಅರಿವೆಯನ್ನು ಬೇಕಾದ ಬಣ್ಣದಲ್ಲಿ ಎದ್ದಲಿಕ್ಕೆ ಬರುವಂತೆ ನಮ್ಮ ಮನಸ್ಸನ್ನು ಬೇಕಾದ ಕ

ಡೆಗೆ ತಿರುವಿಕೊಳ್ಳಲಿಕ್ಕೆ ಬರುತ್ತದೆ. ಅದನ್ನು ಒಳ್ಳೆಯದರ ಕಡೆಗೆ ಒಯ್ಯುವದೂ ಸುಲಭ; ಕೆಡಕಿನ ಕಡೆಗೆ ಒಯ್ಯುವದೂ ಸುಲಭ. ಮನುಷ್ಯನು ಇಂಗ್ರೇಜಿ ಕಲಿಯಲಿಕ್ಕೆ ಹತ್ತಿದರೆ ತನಗೆ ಬೇಕಾಗದಿದ್ದರೂ ತನ್ನ ಮಾತಿನಲ್ಲಿ ಇಂಗ್ರೇಜಿ ಶಬ್ದಗಳನ್ನು ಸ್ವಾಭಾವಿಕವಾಗಿ ಮಿಶ್ರ ಮಾಡುತ್ತಾನೆ. ಸಂಸ್ಕೃತವನ್ನು ಅಭ್ಯಾಸ ಮಾಡುವ ಪಂಡಿತನು ತನ್ನ ಮಾತುಗಳಲ್ಲಿ ಸಂಸ್ಕೃತ ಶ್ಲೋಕಗಳನ್ನು ಹೇಳದೆ ಇರುವದು ಅಶಕ್ಯ. ಮನಸ್ಸನ್ನು ಕೆಟ್ಟ ಜನರ ಸಹವಾಸದಲ್ಲಿ ಇರಗೊಟ್ಟರೆ ವಿಚಾರಗಳೂ ಸಂಭಾಷಣವೂ ಕೆಟ್ಟವು ಆಗುವವು. ಮನಸ್ಸನ್ನು ಈಶ್ವರಭಕ್ತರ ಸೇವೆಯಲ್ಲಿ ಇರಗೊಟ್ಟರೆ ದೇವರ ಧ್ಯಾನ ಮತ್ತು ದೇವರ ಚಿಂತನ ಇವುಗಳ ಹೊರತಾಗಿ ಮನಸ್ಸಿನಲ್ಲಿ ಏನೂ ಬರುವದಿಲ್ಲ. ಮನಸ್ಸು ಯಾವ ಜನರ ನಡುವೆ ಇದ್ದು ಕೆಲಸ ಮಾಡುವದೋ ಅವರಂತೆಯೇ ಸ್ವಭಾವವು ನಿರ್ಮಾಣವಾಗುವದು.

## ತಾತ್ಪರ್ಯ.

ಸಹವಾಸದಂತೆ ಗುಣಗಳು ಬರುವವು. ಒಳ್ಳೇ ಸಹವಾಸದಲ್ಲಿರುವ ಮನುಷ್ಯನು ಕೆಟ್ಟವನಾಗುವ ಸಂಭವವಿಲ್ಲ. ಹಾಗೂ ಕೆಟ್ಟ ಮನುಷ್ಯನ ಸಹವಾಸದಲ್ಲಿ ಇರುವವನು ಮೊದಲಿಗೆ ಒಳ್ಳೇಯವನಿದ್ದರೂ ಒಳ್ಳೇಯವನಾಗಿ ಉಳಿಯುವ ಸಂಭವವು ಇರುವದಿಲ್ಲ. "ಮನುಷ್ಯನು ಯಾರ ಸಹವಾಸದಲ್ಲಿರುತ್ತಾನೆಂಬದನ್ನು ನನಗೆ ತೋರಿಸಿರಿ. ಅಂದರೆ ಅವನು ಎಂಥ ನಡತೆಯವನಿರುತ್ತಾನೆಂಬದನ್ನು ನಾನು ನಿಮಗೆ ಹೇಳುತ್ತೇನೆ" (Show me the company in which a man is, and I shall tell you what he is) ಎಂದು ಇಂಗ್ರೇಜಿಯಲ್ಲಿ ಒಂದು ಗಾದೆಯುಂಟು. ಆದುದರಿಂದ ಸಹವಾಸವೇ ಮುಖ್ಯ. ಸರ್ವಜ್ಞನು ಹೀಗೆ ಹೇಳುತ್ತಾನೆ:—

**ಸಜ್ಜನರ ಸಂಗವದು ಹೆಜ್ಜೇನು ಸವಿದಂತೆ।**
**ದುರ್ಜನರ ಸಂಗದೊಡನಾಟ ಬಚ್ಚಲ।**
**ರೊಜ್ಜೆನಂತಿಹುದು, ಸರ್ವಜ್ಞ** ॥ ೧ ॥

---

# ೭೯. ದೇವರಿಗೆ ಪೂರ್ಣವಾಗಿ ಶರಣು ಹೋಗತಕ್ಕದ್ದು.

ಮಂಗನ ಮರಿಯು ತಾನು ಕೆಳಗೆ ಬೀಳಬಾರದೆಂದು ತನ್ನ ತಾಯಿಯು ನ್ನು ಅವಚಿಕೊಳ್ಳುತ್ತದೆ. ಆದರೆ ಬೆಕ್ಕಿನ ಮರಿಗೆ ಈ ಪ್ರಕಾರ ತನ್ನ ತಾಯಿಯನ್ನು ಅವಚಿಕೊಳ್ಳಲಿಕ್ಕೆ ಬರುವದಿಲ್ಲ. ಆದುದರಿಂದ ಅದು ತನ್ನ ತಾಯಿಯನ್ನೇ ಪೂರ್ಣವಾಗಿ ಅವಲಂಬಿಸಿಕೊಂಡು ಇರುವದರಿಂದ ಅದರ ತಾಯಿಯು ಅದನ್ನು ತನ್ನ ಬಾಯಿಯಲ್ಲಿ ಕಚ್ಚಿಕೊಂಡು ತನಗೆ ಸುರಕ್ಷಿತವಾಗಿ ಕಂಡ ಸ್ಥಳದಲ್ಲಿ ಒಯ್ದು ಇಡುತ್ತದೆ. ಬೆಕ್ಕಿನ ಮರಿಯು ತನ್ನ ತಾಯಿಯು ಒಯ್ದು ಇಟ್ಟಲ್ಲಿಯೇ ಇದ್ದುಕೊಂಡು 'ಮ್ಯಾಂವ್, ಮ್ಯಾಂವ್' ಎಂದು ದೀನಸ್ವರದಿಂದ ಒದರುತ್ತದೆ. ಮಂಗನ ಮರಿಯು ತನ್ನ ತಾಯಿಯನ್ನು ಅವಚಿಕೊಳ್ಳದೆ ಕೆಳಗೆ ಇಳಿಯಿತೆಂದರೆ ಕೆಳಗೆ ಬಿದ್ದು ಪೆಟ್ಟು ತಿನ್ನುತ್ತದೆ. ಅದರಿಂದ ಅದು ಸ್ವಂತ ಶಕ್ತಿಯನ್ನು ಅವಲಂಬಿಸಿ ತನ್ನ ತಾಯಿಯನ್ನು ಅವಚಿಕೊಳ್ಳುತ್ತದೆ. ಬೆಕ್ಕಿನ ಮರಿಯು ಈ ಪ್ರಕಾರ ಸ್ವಂತಶಕ್ತಿಯನ್ನು ಅವಲಂಬಿಸದೆ ತನ್ನ ತಾಯಿಯನ್ನು ಅವಲಂಬಿಸಿಕೊಂಡು ಅದು ಒಯ್ದು ಕಡೆಗೆ ಹೋಗುತ್ತದೆ. ಇದರಿಂದ ಅದಕ್ಕೆ ಮಂಗನ ಮರಿಯಂತೆ ಬಿದ್ದೇನೆಂಬ ಅಂಜಿಕೆ ಇರುವದಿಲ್ಲ. ಇದೇ ಸ್ವಂತ ಶಕ್ತಿ ಮತ್ತು ಕರ್ತೃತ್ವ ಇವುಗಳ ಮೇಲಿನ ವಿಶ್ವಾಸ ಹಾಗೂ ದೇವರಿಗೆ ಎಲ್ಲ ರೀತಿಯಿಂದ ಶರಣು ಹೋಗುವದು ಇವುಗಳ ನಡುವಿನ ಹೆಚ್ಚುಕಡಿಮೆ ಇರುತ್ತದೆ.

## ತಾತ್ಪರ್ಯ.

ತನಗಿಂತ ಹೆಚ್ಚು ಬುದ್ಧಿವಂತರು ಮತ್ತು ಅನುಭವಿಕರು ಇದ್ದು ಅವರು ಸುಹೃದಯರು ಇದ್ದ ಮೇಲೆ ಅವರು ತನ್ನನ್ನು ಕೆಡಿಸಲಿಕ್ಕಿಲ್ಲವೆಂದು ಅವರ ಮೇಲೆ ವಿಶ್ವಾಸವಿಟ್ಟು ನಡೆಯುವದು ಒಳ್ಳೇದು. ದೇವರು ಎಲ್ಲರ ತಂದೆತಾಯಿಯು. ಅವನು ಸರ್ವಜ್ಞಾನಿಯು ಮತ್ತು ಭಕ್ತರ ಕಲ್ಯಾಣವನ್ನು ಮಾಡಲಿಕ್ಕೆ ಬದ್ಧನು ಇರುತ್ತಾನೆ. ಆದ್ದರಿಂದ ಅಂಥವನಿಗೆ ಯಾವ ಕೆಲಸದಲ್ಲಿಯೇ ಆಗಲಿ, ಎಲ್ಲ ರೀತಿಯಿಂದ ಶರಣು ಹೋಗುವದು ಉತ್ತಮವಾದದ್ದು.

## ೮೦. ದಿವ್ಯಾಮೃತ ಪ್ರಾಶನ.

ಒಮ್ಮೆ ಶ್ರೀರಾಮಕೃಷ್ಣ ಪರಮಹಂಸರು ಸಚ್ಚಿದಾನಂದ ದಿವ್ಯಾಮೃತವನ್ನು ಹೇಗೆ ಪ್ರಾಶನ ಮಾಡತಕ್ಕದ್ದೆಂಬುವದನ್ನು ಕುರಿತು ತಮ್ಮ ಶಿಷ್ಯನ ಕೂಡ ಈ ಪ್ರಕಾರ ಸಂಭಾಷಣೆ ಮಾಡಿದರು:—

**ಪರಮಹಂಸರು**—ಒಂದು ದೊಡ್ಡ ಪಾತ್ರೆಯಲ್ಲಿ ಸಕ್ಕರೆಯ ಪಾಕವನ್ನು ಹಾಕಿಟ್ಟರೆ ಆ ಪಾತ್ರೆಯು ಸುತ್ತಲು ನಾಲ್ಕೂ ಕಡೆಯಿಂದ ನೊಣಗಳು ಮುಕ್ಕರುತ್ತವೆ. ಅವುಗಳಲ್ಲಿ ಕೆಲವು ಪಾತ್ರೆಯ ಮೇಲೆ ಕುಳಿತು ಆ ಪಾಕದ ರಸವನ್ನು ಕುಡಿಯುತ್ತವೆ. ಬೇರೆ ಕೆಲವು ರಸದೊಳಗೆ ಬಿದ್ದು ಒದ್ದಾಡುತ್ತ ಆ ಪಾಕದ ಬುಡದ ತನಕ ಹೋಗುತ್ತವೆ. ಇದರಂತೆ ನಮಗೆ ಸಚ್ಚಿದಾನಂದ ದಿವ್ಯಾಮೃತವನ್ನು ಪ್ರಾಶನ ಮಾಡತಕ್ಕದ್ದಿರುತ್ತದೆ. ಇದನ್ನು ನೀನು ಪಾತ್ರೆಯ ಮೇಲೆ ಕುಳಿತು ಪ್ರಾಶನ ಮಾಡುವಿಯೋ? ಅಥವಾ ಆ ಪಾತ್ರೆಯೊಳಗೆ ಧುಮುಕಿ ಆ ಪ್ರಾಶನ ಸುಖದ ಉಪಭೋಗವನ್ನು ತೆಗೆದುಕೊಳ್ಳುವಿಯೋ?"

**ಶಿಷ್ಯ**—ನಾನಂತೂ ಪಾತ್ರೆಯ ಮೇಲೆ ಕುಳಿತು ಪ್ರಾಶನ ಮಾಡುವೆನು. ಒಳಗೆ ಧುಮುಕಿ ಸಾಯಲಾರೆನು.

**ಪರಮಹಂಸರು**—ನೀನು ನಿಜವಾಗಿ ಹುಚ್ಚನು. ಅಮೃತಾಂಬುಧಿಯಲ್ಲಿ ಧುಮುಕುವವನು ಎಂದಿಗೂ ಸಾಯುವದಿಲ್ಲ.

### ತಾತ್ಪರ್ಯ.

ಪರಮೇಶ್ವರನನ್ನು ತಿಳಿದುಕೊಂಡು ಅವನಲ್ಲಿ ಭಕ್ತಿ ವಿಶ್ವಾಸವಿಟ್ಟವರಿಗೆ ಕಷ್ಟ ನಷ್ಟಗಳ ಅಥವಾ ಮರಣದ ಅಂಜಿಕೆಯು ಇರಲಿಕ್ಕೆ ಕಾರಣವಿಲ್ಲ. ಯಾವನಲ್ಲಿ ವಿಶ್ವಾಸವು ಇನ್ನೂ ಮೂಡಿಲ್ಲವೋ ಅವನಿಗೆ ಈ ಭೀತಿಯು ತಪ್ಪಲಾರದು.

---

## ೮೧. ಕ್ಷುದ್ರ ಅನುಕರಣ.

ಶ್ರೀಶಂಕರಾಚಾರ್ಯರ ಬಳಿಯಲ್ಲಿ ಒಬ್ಬ ಮೂರ್ಖ ಶಿಷ್ಯನಿದ್ದನು. ಅವನು ಯಾವಾಗಲು ತನ್ನ ಗುರುಗಳು ಮಾಡುವಂತೆಯೇ ಮಾಡುತ್ತಿದ್ದನು. ಗು

ರುಗಳು "ಶಿವೋಹಮ್" ಎಂದು ನುಡಿದ ಕೂಡಲೆ ಶಿಷ್ಯನು ತಾನೂ "ಶಿವೋಹಮ್" ಎಂದು ನುಡಿಯುತ್ತಿದ್ದನು. ಇದೇ ಪ್ರಕಾರ ಇನ್ನೂ ಅನೇಕ ರೀತಿಯಿಂದ ಅವನು ತನ್ನ ಗುರುಗಳು ಮಾಡಿದಂತೆ ಮಾಡುತ್ತಿದ್ದನು. ಇದನ್ನು ಶ್ರೀ ಶಂಕರಾಚಾರ್ಯರು ಮನಗಂಡು ಇವನ ತಲೆಯೊಳಗಿನ ಹುಚ್ಚು ಬಿಡಿಸಬೇಕೆಂದು ವಿಚಾರ ಮಾಡಿ ಒಮ್ಮೆ ಅವನನ್ನು ಕರೆದುಕೊಂಡು ಕಮ್ಮಾರಶಾಲೆಯ ಮೇಲಿಂದ ಹಾದು ಹೋಗುವಾಗ ತಾವು ಒಂದು ಬೊಗಸೆ ತುಂಬ ಕಬ್ಬಿಣದ ತಪ್ತರಸವನ್ನು ಕುಡಿದು ಅವನಿಗೂ ಕುಡಿಯಲಿಕ್ಕೆ ಹೇಳಿದರು. ಆಗ ಅವನಿಗೆ ಅದನ್ನು ಕುಡಿಯಲಿಕ್ಕೆ ಆಗಲಿಲ್ಲ. ಅಂದಿನಿಂದ ಆ ಶಿಷ್ಯನು ನಾಚಿಕೊಂಡು ಈ ನೀಚವಾದ ಅನುಕರಣವನ್ನು ಬಿಟ್ಟುಕೊಟ್ಟನು.

### ತಾತ್ಪರ್ಯ.

ಪ್ರತಿಯೊಬ್ಬನು ತನ್ನ ಯೋಗ್ಯತೆಯನ್ನು ತಿಳಿದುಕೊಂಡು ಕೆಲಸ ಮಾಡತಕ್ಕದ್ದು. **"ಹುಲಿಯ ಬಣ್ಣಕ್ಕಾಗಿ ನರಿಯು ಮೈ ಸುಟ್ಟುಕೊಂಡಂತೆ"** ಯಾರೂ ಮಾಡಬಾರದು. ಯೋಗ್ಯತೆಯನ್ನು ತಿಳಿದುಕೊಂಡು ಕೆಲಸ ಮಾಡುವವರು ಸುಖದಿಂದ ಇರುವರು. ಯೋಗ್ಯತೆಗೆ ಮೀರಿ ಕೆಲಸಗಳನ್ನು ಮಾಡಲಿಕ್ಕೆ ಪ್ರಯತ್ನ ಮಾಡುವವರು ತಮ್ಮ ಜೀವಕ್ಕೆ ಸುಮ್ಮನೆ ಕಷ್ಟಪಡಿಸಿ ನಿರಾಶೆಯನ್ನೂ ದುಃಖವನ್ನೂ ಅನುಭೋಗಿಸಬೇಕಾಗುವದು.

---

## ೮೨. ಸಂಕುಚಿತ ಮನಸ್ಸು.

ಒಂದು ಬಾವಿಯೊಳಗೆ ಒಂದು ಕಪ್ಪೆಯು ಇರುತ್ತಿತ್ತು. ಅದು ಅಲ್ಲಿಯೇ ಹುಟ್ಟಿ ಬೆಳೆದಿದ್ದ ತನ್ನ ಬಾವಿಯು ಹೊರಗೆ ಹೋಗುವ ಪ್ರಸಂಗವು ಎಂದೂ ಒಂದಿದ್ದಿಲ್ಲ. ಆದುದರಿಂದ ಅದಕ್ಕೆ ತನ್ನ ಬಾವಿಯ ಹೊರಗೆ ಏನು ಇರುತ್ತದೆಂಬದರ ತಿಳುವಳಿಕೆ ಸಹ ಇದ್ದಿಲ್ಲ. ಇಂಥ ಹೊತ್ತಿನಲ್ಲಿ ಒಂದು ಸಮುದ್ರದೊಳಗೆ ಇರತಕ್ಕ ಕಪ್ಪೆಯು ಆ ಬಾವಿಗೆ ಬಂತು. ಆಗ ಆ ಬಾವಿಯೊಳಗಿನ ಕಪ್ಪೆಯು ಮತ್ತು ಸಮುದ್ರದೊಳಗಿನ ಕಪ್ಪೆಯು ನಡುವೆ ಕೆಳಗೆ ಬರೆದ ಪ್ರಕಾರ ಸಂಭಾಷಣೆಯಾಯಿತು:—

**ಬಾವಿಯೊಳಗಿನ ಕಪ್ಪೆ**--ಗೆಳೆಯಾ, ನೀನು ಎಲ್ಲಿಂದ ಬಂದೆ?

**ಸಮುದ್ರದ ಕಪ್ಪೆ**--ನಾನು ಸಮುದ್ರದಿಂದ ಬಂದೆನು.

**ಬಾವಿಯೊಳಗಿನ ಕಪ್ಪೆ**--ಸಮುದ್ರದಿಂದಲೋ! ಸಮುದ್ರವು ಎಷ್ಟು ದೊಡ್ಡದಿರುವದು?

**ಸಮುದ್ರದ ಕಪ್ಪೆ**--ಅದು ಬಹಳ ದೊಡ್ಡದಿರುವದು.

**ಬಾವಿಯೊಳಗಿನ ಕಪ್ಪೆ**--( ತನ್ನ ಕಾಲುಗಳನ್ನು ಚಾಚಿ ) ನೀನು ಹೇಳುವ ಸಮುದ್ರವು ಇಷ್ಟು ದೊಡ್ಡದಿರುತ್ತದೋ?

**ಸಮುದ್ರದ ಕಪ್ಪೆ**--ಇದಕ್ಕಿಂತ ಬಹಳೇ ದೊಡ್ಡದಿರುವದು.

**ಬಾವಿಯೊಳಗಿನ ಕಪ್ಪೆ**--( ಬಾವಿಯ ಒಂದು ದಂಡೆಯಿಂದ ಇನ್ನೊಂದು ದಂಡೆಗೆ ಜಿಗಿದು) ನಿನ್ನ ಸಮುದ್ರವು ಇಷ್ಟು ದೊಡ್ಡದಿರುವದೋ?

**ಸಮುದ್ರದ ಕಪ್ಪೆ**--ಏನು? ಸಮುದ್ರವನ್ನು ನಿನ್ನ ಬಾವಿಗೆ ಹೋಲಿಸುವೆಯಾ? ನಿನ್ನ ಬಾವಿಯು ಹೇಗೆ ಸಮುದ್ರವನ್ನು ಸರಿಗಟ್ಟೀತು?

**ಬಾವಿಯೊಳಗಿನ ಕಪ್ಪೆ**--ಜಗತ್ತಿನಲ್ಲಿ ಈ ಬಾವಿಗಿಂತ ಯಾವದೂ ದೊಡ್ಡದಿರುವದಿಲ್ಲ. ನೀನು ನನ್ನ ಮುಂದೆ ಜೊಳ್ಳು ಕೊಚ್ಚಬೇಡ. ಇಲ್ಲದ್ದೊಂದು ಜಂಭ ಬಡಿದು ನನ್ನನ್ನು ವಂಚಿಸಬೇಕೆನ್ನುತ್ತೀಯಾ? ಹಾಗಾದರೆ ಈಗಲೇ ನಿನ್ನನ್ನು ಇಲ್ಲಿಂದ ಹೊರಗೆ ದೂಡಿ ಹಾಕುತ್ತೇನೆ.

## ತಾತ್ಪರ್ಯ.

ಬಾವಿಯೊಳಗಿನ ಕಪ್ಪೆಯಂತೆ ನಾವು ಎಂದೂ ಸಂಕುಚಿತ ಮನಸ್ಸಿನಿಂದ ನಡೆಯಬಾರದು. ಈ ಜಗತ್ತಿನಲ್ಲಿ ನಮಗೆ ಗೊತ್ತಿರದ ಅನೇಕ ಸ್ಥಳಗಳು ಮತ್ತು ಸಂಗತಿಗಳು ಇರುತ್ತವೆ. ಅವುಗಳನ್ನು ಯಾರಾದರೂ ಹೇಳಿದರೆ ಆ ಸ್ಥಳಗಳು ಇಲ್ಲ ಮತ್ತು ಆ ಸಂಗತಿಗಳು ಸುಳ್ಳು ಎಂದು ಒಮ್ಮೆಲೆ ಅಭಿಪ್ರಾಯ ಕೊಡಬಾರದು. ಅವುಗಳನ್ನು ನಾವು ಚನ್ನಾಗಿ ಕೇಳಿಕೊಂಡು ಬುದ್ಧಿಯಿಂದ ಮತ್ತು ವಿಚಾರದಿಂದ ಪರಿಶೀಲಿಸಬೇಕು. ಆ ಮೇಲೆ ಅವಶ್ಯ ಬಿದ್ದರೆ

ನಾವು ನಮ್ಮ ಅಭಿಪ್ರಾಯ ಕೊಡಬೇಕು. ಇಲ್ಲದಿದ್ದರೆ ನಾವು ನಮ್ಮ ಅಜ್ಞಾ ನವನ್ನೂ ದುರಭಿಮಾನವನ್ನೂ ತೋರಿಸಿದಂತೆ ಆಗುವದು.

---

## ೮೩. ಚಂಚಲ ಮನಸ್ಸು.

ನಾವು ಪರಮೇಶ್ವರನ ಧ್ಯಾನ ಮಾಡುವಾಗ ಮನಸ್ಸು ಯಾಕೆ ಸ್ಥಿರ ವಾಗಿ ನಿಲ್ಲುವದಿಲ್ಲ? ಅದು ಚಂಚಲವಾಗುವ ಕಾರಣವೇನು? ನೊಣವು ಮಿಠಾ ಯಿಗಾರನ ಅಂಗಡಿಯಲ್ಲಿ ಮಿಠಾಯಿಯ ಮೇಲೆ ಕುಳಿತಿದ್ದರೂ, ಅಂಗಡಿಯ ಮೇಲಿಂದ ಒಬ್ಬ ಹಲಾಲಖೋರನು ಹೇಸಿಗೆಯ ಬುಟ್ಟಿಯನ್ನು ತಲೆಯಮೇಲೆ ಹೊತ್ತುಕೊಂಡು ಹೋಗಹತ್ತಿದನೆಂದರೆ ಅದು ಮಿಠಾಯಿಯನ್ನು ಬಿಟ್ಟು ಆ ಹೇಸಿಗೆಯ ಮೇಲೆ ಹೋಗಿ ಕುಳಿತುಕೊಳ್ಳುತ್ತದೆ. ಆದರೆ ಜೇನನೊಣವು ಮಾತ್ರ ಹಾಗೆ ಮಾಡದೆ ಯಾವಾಗಲು ಹೂವಿನ ಮೇಲೆ ಕುಳಿತು ಅದರ ಮಕ ರಂದವನ್ನು ಸೇವಿಸುತ್ತದೆ. ಅದು ಎಂದೂ ಹೊಲಸಿನ ಕಡೆಗೆ ಹೋಗುವ ದಿಲ್ಲ. ಪ್ರಾಪಂಚಿಕರು ನೊಣದಂತೆ ಇರುವರು. ಒಂದೊಂದು ವೇಳೆ ಅವರಿಗೆ ಸೀ ಪದಾರ್ಥವು ರುಚಿ ಹತ್ತಿದರೂ ಅವರ ಮನಸ್ಸಿನ ಪ್ರವೃತ್ತಿಯು ಹೊಲ ಸಿನ ಕಡೆಗೆ ಅಂದರೆ ವಿಷಯಗಳ ಕಡೆಗೆ ಇರುವದರಿಂದ ಅವರು ಮತ್ತೆ ತಿಪ್ಪಿ ಯ ಕಡೆಗೆ ಹೋಗುತ್ತಾರೆ.

ಪೂರ್ಣವಾಗಿ ಸಂಸಾರ ಬದ್ಧವಾದ ಜೀವವು ತಿಪ್ಪಿಯಲ್ಲಿ ಹುಟ್ಟಿ ಅಲ್ಲಿ ಯೇ ಸಾಯುವ ಹುಳದಂತೆ ಇರುವದು. ಇದಕ್ಕೆ ತಿಪ್ಪಿಯ ಹೊರತು ಒಳ್ಳೆಯ ವಸ್ತುಗಳ ಕಲ್ಪನೆಯು ಇರುವದಿಲ್ಲ. ಸಾಧಾರಣ ಪ್ರಾಪಂಚಿಕ ಜೀವವು ಒಂ ದೊಂದು ವೇಳೆ ಸಕ್ಕರಿಯ ಮೇಲೆಯೂ ಒಂದೊಂದು ವೇಳೆ ಹೊಲಸಿನ ಮೇಲೆ ಯೂ ಕುಳಿತುಕೊಳ್ಳುವ ನೊಣವನ್ನು ಹೋಲುವದು. ಆದರೆ ಮುಕ್ತ ಜೀವವು ಯಾವಾಗಲು ಮಧುವನ್ನೇ ಸೇವಿಸುತ್ತಿರುವ ಜೇನನೊಣವನ್ನು ಹೋಲುವದು. ಅದು ಅನ್ಯ ಪದಾರ್ಥಗಳನ್ನು ಎಂದೂ ಮುಟ್ಟುವದಿಲ್ಲ.

### ತಾತ್ಪರ್ಯ.

ಒಳ್ಳೇ ಮನುಷ್ಯರ ಮನಸ್ಸಿನ ಒಲವು ಒಳ್ಳೇದರ ಕಡೆಗೆ ಇರುತ್ತದೆ.

ಕೆಟ್ಟ ಮನುಷ್ಯರ ಮನಸ್ಸಿನ ಒಲವು ಕೆಟ್ಟದರ ಕಡೆಗೆ ಇರುತ್ತದೆ. ಸಾಧಾರಣ ಮನುಷ್ಯರ ಮನಸ್ಸಿನ ಒಲವು ಒಮ್ಮೊಮ್ಮೆ ಒಳ್ಳೇದರ ಕಡೆಗೂ ಒಮ್ಮೊಮ್ಮೆ ಕೆಡಕಿನ ಕಡೆಗೂ ಇರುವದು. ಯಾವಾಗಲು ಒಳ್ಳೇದರ ಕಡೆಗೆ ಒಲವು ಇಟ್ಟು ನಡೆಯುವ ಮನುಷ್ಯನೇ ಜನರ ಮನ್ನಣೆಗೂ ಪರಮೇಶ್ವರನ ಕೃಪೆಗೂ ಪಾತ್ರನಾಗುತ್ತಾನೆ.

## ೮೪. ಸಂಸಾರದ ಮನುಷ್ಯನೂ ಸಾಕಿದ ಮುಂಗಲಿಯೂ ಒಂದೇ.

ಸಂಸಾರದಲ್ಲಿ ಆಸಕ್ತನಾದ ಮನುಷ್ಯನ ಸ್ಥಿತಿಯು ಮನೆಯಲ್ಲಿ ಸಾಕಿದ ಮುಂಗಲಿಯಂತೆ ಇರುತ್ತದೆ. ಮುಂಗಲಿಯನ್ನು ಸಾಕಿದವನು ಆ ಪ್ರಾಣಿಯು ಸಲುವಾಗಿ ಒಂದು ಗೋಡೆಯ ಮೇಲೆ ಎತ್ತರವಾದ ಸ್ಥಳದಲ್ಲಿ ಒಂದು ಗೂಡನ್ನು ಕಟ್ಟಿಸಿ ಕೊಡುವನು. ಆ ಮೇಲೆ ಅದರ ಕುತ್ತಿಗೆಗೆ ಒಂದು ಹುರಿಯ ತುದಿಯಿಂದ ಬಿಗಿದು ಅದರ ಇನ್ನೊಂದು ತುದಿಗೆ ಒಂದು ಭಾರವಾದ ಕಟ್ಲಿಯನ್ನು ಕಟ್ಟಿ ಆ ಕಟ್ಲಿಯನ್ನು ಗೋಡೆಯ ಮೇಲಿಂದ ಇಳಿಬಿಡುವನು. ಆ ಮೇಲೆ ಆ ಮುಂಗಲಿಯನ್ನು ಅದರ ಗೂಡಿನ ಹೊರಗೆ ಆಡಲಿಕ್ಕೆ ಬಿಡುವನು. ಆಗ ಅದು ಆ ಗೋಡೆಯ ಕೆಳಗೆ ಇಳಿದು ತನಗೆ ಬೇಕಾದ ಕಡೆಗೆ ಮನೆಯ ಕೋಣೆಯಲ್ಲಾಗಲಿ, ಅಂಗಳದಲ್ಲಾಗಲಿ ಆಡುವದು ಹೀಗೆ ಆಡುವಾಗ ಅದು ಏನಾದರೂ ನೋಡಿ ಹೆದರಿತೆಂದರೆ ತಿರುಗಿ ಗೋಡೆಯನ್ನೇರಿ ತನ್ನ ಗೂಡಿನೊಳಗೆ ಹೋಗುವದು. ಅಯ್ಯೋ! ಅದು ಅಲ್ಲಿ ಬಹಳ ಹೊತ್ತು ನಿಂತುಕೊಳ್ಳಲಾರದು. ಯಾಕೆಂದರೆ ಹುರಿಯ ತುದಿಗೆ ಕಟ್ಟಿದ ಭಾರವಾದ ಕಟ್ಲಿಯು ಅದನ್ನು ಆ ಸ್ಥಳದಿಂದ ತಿರುಗಿ ಕೆಳಗೆ ಜಗ್ಗುವದು! ಇದರಂತೆ ಸಂಸಾರದೊಳಗಿನ ಕಷ್ಟಗಳಿಗೂ ದುಃಖಗಳಿಗೂ ಬೇಸರಪಟ್ಟಂಥ ಮನುಷ್ಯನು ಪರಮೇಶ್ವರನಿಗೆ ಶರಣು ಹೋಗಲಿಕ್ಕೆ ಹಾತೊರೆದ ಕೂಡಲೆ ಪುನಃ ಸಂಸಾರದ ಮೋಹವೆಂಬ ಕಟ್ಲಿಯು ಅವನನ್ನು ಜಗ್ಗಿ ತಂದು ಸಂಸಾರದ ದುಃಖದಲ್ಲಿ ಕೆಡವುತ್ತದೆ.

### ತಾತ್ಪರ್ಯ.

ಸಂಸಾರದ ಮೋಹವು ಅನಿವಾರವಿರುತ್ತದೆ. ಅದನ್ನು ತಪ್ಪಿಸಿಕೊಂಡು

ಪರಮೇಶ್ವರನಿಗೆ ಶರಣು ಹೋಗಬೇಕಾದರೆ ಪರಮೇಶ್ವರನಲ್ಲಿ ಬಹಳ ದೃಢ ವಾದ ಭಕ್ತಿಯನ್ನು ಇಡತಕ್ಕದ್ದು.

---

## ೮೫. ದಿವ್ಯಪ್ರೇಮವಿದ್ದಲ್ಲಿ ದೇವರು ದರ್ಶನ ಕೊಡುತ್ತಾನೆ.

ಭಾಗವತರ ಆಟದಲ್ಲಿ ತಾಳಗಳನ್ನು ಕಟೆಯುತ್ತ ಮತ್ತು ಮೃದಂಗ ಪಿ ಟೀಲುಗಳನ್ನು ಬಾರಿಸುತ್ತ ಎಲ್ಲಿಯತನಕ ದೊಡ್ಡ ಧ್ವನಿಯಿಂದ ಹಾಡುವದು, ಒದರಾಡುವದು, ಚೀರಾಡುವದು ನಡೆಯುತ್ತದೋ ಅಲ್ಲಿಯ ವರೆಗೆ ಕೃಷ್ಣನ ವೇಷವನ್ನು ಹಾಕಿಕೊಂಡವನು ಒಳಗೆ ಕೋಣೆಯಲ್ಲಿ ತಂಬಾಕು ಸೇದುತ್ತ ಹರಟೆಯನ್ನು ಕೊಚ್ಚುತ್ತ ಕುಳಿತುಕೊಂಡಿರುತ್ತಾನೆ. ಆದರೆ ಇದೆಲ್ಲ ಗದ್ದಲವು ತೀರಿ ನಾರದನ ವೇಷ ಹಾಕಿಕೊಂಡವನು ಬಂದು ಪ್ರೇಮಭಾವದಿಂದಲೂ ತನ್ನ ಮಂಜುಳವಾದ ಧ್ವನಿಯಿಂದಲೂ "ಮುಕುಂದಾ, ಕೃಷ್ಣಾ, ಬಾ" ಎಂದು ಕರೆದ ಕೂಡಲೆ ಕೃಷ್ಣನಿಗೆ ಒಳಗೆ ಕೂಡ್ರಲಿಕ್ಕೆ ಆಗುವದಿಲ್ಲ. ಅದರಂತೆ ಭಕ್ತನು ಪರಮೇಶ್ವರನಿಗೆ ಸುಮ್ಮನೆ ಬಾ ಎಂದು ಎಷ್ಟು ಸಾರೆ ಒದರಿದರೂ ಅವನು ದರ್ಶನ ಕೊಡುವದಿಲ್ಲ. ಆದರೆ ಭಕ್ತನು ಪ್ರೇಮಪೂರ್ವಕವಾದ ಅಂತಃಕರಣದಿಂದ ಆತನ ಧ್ಯಾನ ಮಾಡಿ ಕರೆದರೆ ಆತನು ದರ್ಶನ ಕೊಡಲಿಕ್ಕೆ ಎಂದೂ ತಡಮಾಡುವದಿಲ್ಲ.

### ತಾತ್ಪರ್ಯ.

ದೇವರಿಗೆ ಡಾಂಭಿಕ ಭಕ್ತಿಯು ಸೇರುವದಿಲ್ಲ. ಆತನು ಭಕ್ತನ ನಿಜವಾದ ಅಂತಃಕರಣವನ್ನು ಪರೀಕ್ಷಿಸುತ್ತಾನೆ.

---

## ೮೬. ನಮ್ರತೆಯ ಉಪದೇಶ.

ಒಬ್ಬ ಗೃಹಸ್ಥನು ಒಬ್ಬ ಸಾಧುವಿನ ಬಳಿಗೆ ಹೋಗಿ ಸುಳ್ಳೇ ನಮ್ರತೆಯನ್ನು ತೋರಿಸಿ-"ಸ್ವಾಮಿ, ನಾನು ತಮ್ಮ ದೀನನಾದ ದಾಸನಿರುತ್ತೇನೆ.

ನನಗೆ ಮೋಕ್ಷವು ಹೇಗೆ ದೊರಕುವದೆಂಬದನ್ನು ದಯಮಾಡಿ ಹೇಳಬೇಕು" ಎಂದು ಬೇಡಿಕೊಂಡನು. ಅದಕ್ಕೆ ಆ ಸಾಧುವು ಅವನ ಕಪಟವಾದ ನಮ್ರತೆಯನ್ನು ನೋಡಿಕೊಂಡು-"ಒಳ್ಳೇದು. ನಿನಗಿಂತ ಅಪವಿತ್ರವಾದ ಪದಾರ್ಥವನ್ನು ತೆಗೆದುಕೊಂಡು ಬಾ. ಅಂದರೆ ನಿನಗೆ ಮೋಕ್ಷವು ಹೇಗೆ ದೊರಕುವದೆಂಬದನ್ನು ಹೇಳುವೆನು" ಎಂದು ಉತ್ತರ ಕೊಟ್ಟನು. ಆ ಮೇಲೆ ಆ ಗೃಹಸ್ಥನು ತನಗಿಂತ ಅಪವಿತ್ರ ಪದಾರ್ಥವನ್ನು ಹುಡುಕಹತ್ತಿದನು. ಕೆಲವು ಹೊತ್ತು ಅವನಿಗೆ ಅಂಥ ಪದಾರ್ಥವು ಯಾವದೂ ಸಿಗಲಿಲ್ಲ. ಕಡೆಗೆ ಅವನು ತನ್ನ ಮಲವನ್ನು ನೋಡಿ-"ಇದು ಮಾತ್ರ ನನಗಿಂತ ಅಪವಿತ್ರವಾದದ್ದು. ಇದನ್ನು ತೆಗೆದುಕೊಂಡು ಹೋಗೋಣ" ಎಂದು ಅದಕ್ಕೆ ಕೈಹಾಕಿದನು. ಆದರೆ ಅದರೊಳಗಿಂದ-"ಎಲೈ ಪಾಪಿಷ್ಠನೇ, ನೀನು ನನ್ನನ್ನು ಸ್ಪರ್ಶ ಮಾಡಬೇಡ. ನಾನು ಮೊದಲಿಗೆ ಅನ್ನದ ರೂಪದಿಂದ ಒಳ್ಳೇ ಸ್ಥಿತಿಯಲ್ಲಿದ್ದಾಗ್ಗೆ ದೇವರಿಗೆ ನೈವೇದ್ಯ ಕೊಡಲಿಕ್ಕೆ ಸಹ ಯೋಗ್ಯನಿದ್ದೆನು. ಆದರೆ ನಿನ್ನ ದುಷ್ಟ ಸಂಸರ್ಗದಿಂದ ನನಗೆ ಈ ನೀಚ ಸ್ಥಿತಿಯು ಪ್ರಾಪ್ತವಾಯಿತು. ಜನರು ನನ್ನನ್ನು ನೋಡಿದ ಕೂಡಲೆ ತಮ್ಮ ಮೂಗನ್ನು ಮುಚ್ಚಿಕೊಂಡು ನನ್ನಿಂದ ದೂರ ಹೋಗುತ್ತಾರೆ. ನೀನು ಇನ್ನೊಮ್ಮೆ ಸ್ಪರ್ಶ ಮಾಡಿದರೆ ನನ್ನ ಸ್ಥಿತಿಯು ಇದಕ್ಕೂ ಎಷ್ಟು ನೀಚವಾಗುವದೋ ದೇವರೇ ಬಲ್ಲ" ಎಂಬ ಶಬ್ದಗಳು ಹೊರಟವು. ಅದರಿಂದ ಆ ಗೃಹಸ್ಥನಿಗೆ ನಮ್ರತೆಯ ಉಪದೇಶವು ಪೂರ್ಣವಾಗಿ ದೊರಕಲು ಅವನು ನಮ್ರನಾಗಿ ಪೂರ್ಣಾವಸ್ಥೆಯನ್ನು ಹೊಂದಿದನು.

## ತಾತ್ಪರ್ಯ.

ಈಶ್ವರನಿರ್ಮಿತ ಈ ಅಗಾಧವಾದ ಸೃಷ್ಟಿಯಲ್ಲಿ ಚೇತನ ಅಚೇತನ ಯಾವತ್ತು ಪದಾರ್ಥಗಳಿಂದ ಮನುಷ್ಯನಿಗೆ ಒಮ್ಮೊಮ್ಮೆ ಉಪದೇಶವು ದೊರಕುವದು. ಆದರೆ ಯೋಗ್ಯ ಲಕ್ಷ್ಯಕೊಟ್ಟು ಉಪದೇಶವನ್ನು ತಿಳಕೊಳ್ಳುವವರು ಮಾತ್ರ ಇರಬೇಕು.

## ೮೭. ಜಗತ್ತಿನ ಬಾಳುವೆಯು ಒಂದು ಕ್ಷಣದ ಆಟವು.

ಸಣ್ಣ ಹುಡುಗರು ತಾವೊಬ್ಬರೇ ಇದ್ದಾಗ ತಮ್ಮ ಗೊಂಬೆಗಳ ಕೂಡ ಆಟವನ್ನು ಆಡುತ್ತಾರೆ. ಆದರೆ ಅವರು ತಮ್ಮ ತಾಯಿಯು ಬಂದ ಕೂಡಲೆ ಆ ಗೊಂಬೆಗಳನ್ನು ಚಲ್ಲಿಕೊಟ್ಟು—“ಅವ್ವಾ! ಅವ್ವಾ!” ಎಂದು ಕೂಗುತ್ತ ಅವಳ ಬಳಿಗೆ ಓಡಿಹೋಗುತ್ತಾರೆ. ಅದರಂತೆ ನೀವು ಈ ಜಗತ್ತಿನಲ್ಲಿ ದ್ರವ್ಯ, ಮಾನ, ಕೀರ್ತಿ ಎಂಬ ಗೊಂಬೆಗಳ ಕೂಡ ಅಂಜಿಕೆ ಅಥವಾ ಚಿಂತೆ ಇಲ್ಲದೆ ಆಟವನ್ನು ಆಡುತ್ತಿದ್ದೀರಿ. ಒಮ್ಮೆ ನೀವು ಜಗನ್ಮಾತೆಯನ್ನು ನೋಡಿದ ಕೂಡಲೆ ದ್ರವ್ಯ, ಮಾನ, ಕೀರ್ತಿಗಳಲ್ಲಿ ನಿಮ್ಮ ಪ್ರೀತಿಯು ಅಳಿದುಹೋಗಿ ನೀವು ಅವಳ ಕಡೆಗೆ ಓಡಿಹೋಗುವಿರಿ.

### ತಾತ್ಪರ್ಯ.

ಪರಮೇಶ್ವರನ ಜ್ಞಾನವಾಗುವತನಕ ಜನರು “ತಮ್ಮ ಸಂಸಾರ, ತಮ್ಮ ಮನೆ, ತಮ್ಮ ಹೊಲ, ತಮ್ಮ ವ್ಯಾಪಾರ ಮುಂತಾದ ಕಾರ್ಯಕಲಾಪಗಳಲ್ಲಿ ತೊಡಗುತ್ತಾರೆ. ಪರಮೇಶ್ವರನ ಜ್ಞಾನವಾದ ಬಳಿಕ ಆ ಕಾರ್ಯಕಲಾಪಗಳು ಅಲ್ಲಿಂದಲ್ಲೇ ಉಳಿದುಹೋಗುತ್ತವೆ. ಅವುಗಳ ಕಡೆಗೆ ಯಾರೂ ಲಕ್ಷಿಸುವದಿಲ್ಲ. ಕುಡಿಯಲಿಕ್ಕೆ ಅಮೃತವು ಸಿಕ್ಕ ಬಳಿಕ ಹಾಲು ಅಥವಾ ಮಜ್ಜಿಗೆ ಯಾರು ಅಪೇಕ್ಷೆ ಮಾಡುವರು?

---

## ೮೮. ಬ್ರಹ್ಮಚರ್ಯದ ಮಹತ್ವವು.

ಹೊಸದಾಗಿ ಹುಟ್ಟಿದ ಆಕಳ ಕರುವು ಬಹಳ ಉಲ್ಲಾಸವುಳ್ಳದ್ದೂ, ಆನಂದವುಳ್ಳದ್ದೂ ಇರುತ್ತದೆ. ಅದು ಹಗಲೆಲ್ಲ ಟಣ್ ಟುಣ್ ಎಂದು ಜಿಗಿದಾಡುತ್ತದೆ. ಆದರೆ ತನ್ನ ತಾಯಿಯ ಮೊಲೆಯುಣ್ಣುವಾಗ ಅದರ ಜಿಗಿದಾಟವು ಕಡಿಮೆಯಾಗುತ್ತದೆ. ಅದರ ಕುತ್ತಿಗೆಗೆ ಕಣ್ಣಿಯನ್ನು ಹಚ್ಚಿದ ಕೂಡಲೆ ಅದರ ಉಲ್ಲಾಸವು ಹೊರಟುಹೋಗುತ್ತದೆ. ಮೋರೆಯು ಬಾಡುತ್ತದೆ. ಮತ್ತು

ಸೊರಗಹತ್ತುತ್ತದೆ. ಆದರಂತ ಹುಡುಗನು ತನ್ನ ಮದುವೆಯಾಗಿ ತನ್ನಮೇಲೆ ಸಂಸಾರದ ಭಾರವು ಬೀಳುವವರೆಗೆ ಆನಂದದಲ್ಲಿರುತ್ತಾನೆ. ಅವನ ಮೇಲೆ ಒಮ್ಮೆ ಸಂಸಾರದ ಭಾರವು ಬಿತ್ತೆಂದರೆ ಅವನ ಮೋರೆಯ ಮೇಲೆ ಉದಾಸೀನತೆಯು ಮತ್ತು ಚಿಂತೆಯ ಲಕ್ಷಣಗಳು ಕಾಣಹತ್ತುತ್ತವೆ. ಹಾಗೂ ಅವನ ಗಲ್ಲದ ಮೇಲಿನ ಗುಲಾಬಿ ಬಣ್ಣವು ಹೊರಟುಹೋಗಿ ಅವನ ಹಣೆಯ ಮೇಲೆ ನೀರಿಗೆಗಳು ಬೀಳುತ್ತವೆ. ಆದರೆ ಅವಿವಾಹಿತನಾಗಿರುವವನು ಪ್ರಾತಃಕಾಲದ ಗಾಳಿಯಂತೆ ಸ್ವತಂತ್ರನೂ, ಇದೇ ಈಗ ಅರಳಿದ ಹೂವಿನಂತೆ ಸುಂದರನೂ, ಹಿಮಬಿಂದುವಿನಂತೆ ಪವಿತ್ರನೂ ಆಗಿರುವನು.

## ತಾತ್ಪರ್ಯ.

ಅಖಂಡ ಬ್ರಹ್ಮಚರ್ಯವನ್ನು ಪಾಲಿಸುವವರ ಶಾರೀರಿಕ ಮತ್ತು ಮಾನಸಿಕ ಶಕ್ತಿಯು ಸರ್ವರೀತಿಯಿಂದ ಬೆಳೆಯುವದು. ಹನುಮಂತನು ಬ್ರಹ್ಮಚಾರಿಯಾಗಿದ್ದರಿಂದ ದ್ರೋಣಗಿರಿಯಂಥ ಪರ್ವತವನ್ನು ಚಂಡಿನಂತೆ ಹಾರಿಸಿಕೊಟ್ಟನು. ಭೀಷ್ಮಾಚಾರ್ಯನು ಬ್ರಹ್ಮಚಾರಿಯಾಗಿದ್ದರಿಂದ ಭಾರತೀಯ ಯುದ್ಧದಲ್ಲಿ ಶ್ರೀಕೃಷ್ಣನಿಗೆ ಸಹ ತನ್ನ ಪ್ರತಿಜ್ಞಾಭಂಗವನ್ನು ಮಾಡಲಿಕ್ಕೆ ಹಚ್ಚಿ ಅವನಿಗೆ ಸುದರ್ಶನ ಚಕ್ರವನ್ನು ಕೈಯಲ್ಲಿ ಹಿಡಿದುಕೊಳ್ಳುವ ಪ್ರಸಂಗವನ್ನು ತಂದನು.

